ನವಕರ್ನಾಟಕ ಪ್ರಕಾಶನದ ೩೬೦೬ನೇ ಪ್ರಕಟಣೆ

# ನಗೆ ನವಿಲು

(ಲಘುಲೇಖನ, ಹರಟೆ, ನಗೆಬರಹದ ಸಂಕಲನ)

ಡಾ॥ ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್



ನವಕರ್ನಾಟಕ ಪ್ರಕಾಶನ

**NAGE-NAVILU** (Kannada)
*A Collection of Humorous Writings*
*by Dr. Jyotsna Krishnananda Kamath*

**First Edition : 2013** **Pages : 88** **Price : ₹ 55**

*Paper used for this book :* 70 gsm Maplitho 18.6 Kgs (1/8 Demy Size)

ಮೊದಲ ಮುದ್ರಣ : 2013

ಪ್ರತಿಗಳ ಸಂಖ್ಯೆ : 1000



**ಬೆಲೆ : ₹ 55**

ಮುಖಪುಟ ಮತ್ತು ಒಳಚಿತ್ರಗಳು : ಕಮಲಂ ಅರಸು
ಚಿತ್ರಗಳ ಒಡೆತನ : ಪ್ರಕಾಶಕರದು

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001
ದೂರವಾಣಿ: 080-30578020/22 ಫ್ಯಾಕ್ಸ್: 080-30578023
email : navakarnataka@gmail.com

*ಶಾಖೆಗಳು/ಮಳಿಗೆಗಳು*
ನವಕರ್ನಾಟಕ, ಕ್ರೆಸೆಂಟ್ ರಸ್ತೆ, ಬೆಂಗಳೂರು - 1, ✆ 080-30578028/35, email : nkpsales@gmail.com
ನವಕರ್ನಾಟಕ, ಗಾಂಧಿನಗರ, ಬೆಂಗಳೂರು - 9, ✆ 080-22251382, email : nkpgnr@gmail.com
ನವಕರ್ನಾಟಕ, ಕೆ.ಎಸ್.ರಾವ್ ರಸ್ತೆ, ಮಂಗಳೂರು - 1, ✆ 0824-2441016, email : nkpmng@gmail.com
ನವಕರ್ನಾಟಕ, ಬಲ್ಮಠ, ಮಂಗಳೂರು - 1, ✆ 0824-2425161, email : nkpbalmatta@gmail.com
ನವಕರ್ನಾಟಕ, ರಾಮಸ್ವಾಮಿ ವೃತ್ತ, ಮೈಸೂರು - 24, ✆ 0821-2424094, email : nkpmys@yahoo.co.in
ನವಕರ್ನಾಟಕ, ಸ್ಟೇಷನ್ ರಸ್ತೆ, ಗುಲಬರ್ಗಾ - 2, ✆ 08472-224302, email : nkpglb@gmail.com

**0101133606** **ISBN 978-81-8467-326-5**

Printed by R. S. Rajaram at Navakarnataka Printers, No. 167 & 168, 10th Main III Phase, Peenya Industrial Area, Bangalore - 560 058 and published by him for Navakarnataka Publications (P) Ltd., Embassy Centre, 11, Crescent Road P. B. 5159, Bangalore-560 001 (INDIA). Typeset at Navakarnataka, Bangalore-560 001

# ಪರಿವಿಡಿ

# ಎರಡು ಮಾತು

'ನಗೆ–ನವಿಲು' ನನ್ನ ಹಾಸ್ಯ ಪ್ರಬಂಧಗಳ ನಾಲ್ಕನೆಯ ಸಂಕಲನವಾಗಿದೆ. ಈ ಮೊದಲಿನ 'ಸಂಸಾರದಲ್ಲಿ ಸ್ವಾರಸ್ಯ' (1987 2ನೇ ಮುದ್ರಣ 1992–ಟಿ.ವಿ.ಎಸ್. ಗ್ರಂಥಮಾಲೆ, ಮೈಸೂರು) 'ಹೀಗಿದ್ದೇವೆ ನಾವು' (ಪುಸ್ತಕ ಪ್ರಕಾಶನ, ಬೆಂಗಳೂರು–1993), 'ನಗೆ ಕೇದಿಗೆ' (ಮನೋಹರ ಗ್ರಂಥಮಾಲೆ ಧಾರವಾಡ 1999)ಗಳು ಪ್ರಕಟವಾಗಿ ಒಂದೂವರೆ–ಎರಡು ದಶಕಗಳೇ ಕಳೆದಿವೆ. ನಡುವೆ ನನ್ನ ಹಾಸ್ಯ ಲೇಖನಗಳಿಗೆಲ್ಲ ಕೇಂದ್ರ ಬಿಂದುವಾಗಿದ್ದ ಪತಿಯ ಆಕಸ್ಮಿಕ ನಿಧನದಿಂದ, ವಿನೋದ ವಿಚಾರಗಳ ಸೆಲೆಯೇ ಬತ್ತಿಹೋದಂತೆ ಆಯಿತು. ಇತ್ತೀಚೆಗೆ ಪುನಃ ಬರವಣಿಗೆಯನ್ನು ಪ್ರಾರಂಭಿಸುವ ಯತ್ನದಲ್ಲಿದ್ದೆ. ಈ ಸಮಯದಲ್ಲಿ ನನ್ನ ಹಿತೈಷಿಗಳಾದ ನವಕರ್ನಾಟಕದ ವ್ಯವಸ್ಥಾಪಕ ನಿರ್ದೇಶಕರಾಗಿರುವ ಶ್ರೀ ಆರ್.ಎಸ್. ರಾಜಾರಾಮ್ ಅವರು ಬರಹದಲ್ಲಿ ನಾನು ತೊಡಗುವಂತೆ ನೋಡಿಕೊಂಡರು. "ನಿಮ್ಮ ಲಘುಬರಹ ಸಂಕಲನ ಬರಬೇಕು!" ಎಂದು ಹೇಳಲಾರಂಭಿಸಿದರು. "ಹಾಸ್ಯಲೇಖ ಬರೆದು ನಗಿಸುವೆನೆಂದುಕೊಂಡಿದ್ದ ಹುಸಿ ಭರವಸೆಯೂ ಬತ್ತಿ ಹೋಗಿದೆ!" ಎಂದೆ. ಅವರು "ಬರವಣಿಗೆ ಪ್ರಾರಂಭಿಸಿ! ಈಗಾಗಲೇ ಬರೆದು ಮರೆತವು ಕೆಲವು ಇರಲಿಕ್ಕೆ ಸಾಕು. ಹುಡುಕಿ ನೋಡಿ! ಕೆಲವನ್ನು ಹೊಸದಾಗಿ ಸೇರಿಸಿ! ಬೇಗ ಬೆಳಕು ಕಾಣುವಂತೆ ನೋಡಿಕೊಳ್ಳುತ್ತೇನೆ" ಎಂದರು. ಇನ್ನಿಲ್ಲದಂತೆ ಪ್ರೋತ್ಸಾಹಿಸಿದರು. ಅವರಿಂದಾಗಿಯೇ ಈ ಕೃತಿ ಹೊರಬರುವಂತೆ ಆದದ್ದರಿಂದ ಮೊದಲಿಗೆ ಶ್ರೀ ರಾಜಾರಾಮ್ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆ ಸಲ್ಲುತ್ತದೆ.

ನಾನು ಹಾಸ್ಯಲೇಖಕಿ ಎಂದು ರೂಪಗೊಂಡಿದ್ದು ತೀರ ಆಕಸ್ಮಿಕ! ಗಂಭೀರವಾದ, ಸಂಶೋಧನಾತ್ಮಕ, ಬರವಣಿಗೆಯನ್ನು ಸಾಕಷ್ಟು ರೂಢಿಸಿಕೊಂಡಿದ್ದೆ. ಐತಿಹಾಸಿಕವಾದ ಸಮಾಜ ಜೀವನ, ಚಿಂತನ, ಶಿಕ್ಷಣ, ಸ್ತ್ರೀಯರ ಸ್ಥಾನಮಾನಗಳ ಕುರಿತ ಪುಸ್ತಕಗಳು, ನೂರಾರು ಲೇಖಗಳು ಬೆಳಕು ಕಂಡು ದಶಕಗಳೇ ಕಳೆದಿವೆ! ಆದರೆ 'ಹಾಸ್ಯಲೇಖಕಿ' ಎಂದು ಗುರುತಿಸಲ್ಪಟ್ಟದ್ದು ಆಕಸ್ಮಿಕ. ಮೈಸೂರು ಆಕಾಶವಾಣಿಯ ಮೊದಲ ನಿರ್ದೇಶಕಿ ಎಂದು ಅಧಿಕಾರ ವಹಿಸಿಕೊಂಡಾಗ ಅಲ್ಲಿ ಕನ್ನಡ ಕಾರ್ಯಕ್ರಮಗಳನ್ನು ನೋಡಿಕೊಳ್ಳುತ್ತಿದ್ದ ಹೂಗೊಪ್ಪಲು ಕೃಷ್ಣಮೂರ್ತಿ, ಹಾಸ್ಯ ಭಾಷಣ ಮಾಲಿಕೆ ಪ್ರಾರಂಭಿಸಿದರು. ಸ್ಥಳೀಯ ಹೆಸರುವಾಸಿ ಲೇಖಕರಿಂದಾಗಿ ಆ ಮಾಲಿಕೆ ಜನಪ್ರಿಯವಾಯಿತು. ಅವರೆಲ್ಲರ ಸರದಿ ಮುಗಿದು ಶೂನ್ಯತೆ ಆವರಿಸುವದರಲ್ಲಿತ್ತು! ಕೃಷ್ಣಮೂರ್ತಿ ಒಂದು ದಿನ "ಮ್ಯಾಡಂ! ನೀವು ಒಂದು ವಿನೋದದ ರೇಡಿಯೊ ಭಾಷಣ ಬರೆದುಕೊಡ್ರಿ! ಎಂದು ಕೇಳಿಕೊಂಡರು. ಈ ತನಕ ಆ ಕುರಿತು ಯೋಚಿಸಿಯೇ ಇರಲಿಲ್ಲ. ತೀರ ಅವಶ್ಯ ಇತ್ತೆಂದು ಬರೆದೆ. ಬಳಿಕ ಇನ್ನೂ ನಾಲ್ಕಾರು ಬರೆದು ಅವು ಪ್ರಸಾರವಾದವು. ಅವನ್ನು ಕೇಳಿದ ಪ್ರಸಿದ್ಧ ಸಾಹಿತಿ, (ದಿ) ಚದುರಂಗರು, ತುಂಬ ಮೆಚ್ಚಿಕೊಂಡರು. ಅಷ್ಟೇ ಅಲ್ಲ, "ನೀವು ಇದೇ ರೀತಿ ಇನ್ನೂ 10–12 ಲೇಖ ಬರೆದರೆ, ಒಂದು ಸಂಕಲನ ಆಗಿಬಿಡುತ್ತದೆ. ನಿಮಗೊಬ್ಬ ಒಳ್ಳೆಯ

ಪ್ರಕಾಶಕರನ್ನ ಹುಡುಕಿ ಕೊಡ್ತೀನಿ!" ಅಂದರು. ಇಂಥ ಅವಕಾಶವನ್ನು ಹುಸಿ ಹೋಗಗೊಡಲಿಲ್ಲ. ನನ್ನ 'ಸಂಸಾರದಲ್ಲಿ ಸ್ವಾರಸ್ಯ'ವನ್ನು ತಳುಕಿನ ವೆಂಕಣ್ಣಯ್ಯ ಗ್ರಂಥಮಾಲೆ ಮೈಸೂರಿನಿಂದ ಟಿ.ಎಸ್. ವೆಂಕಣ್ಣಯ್ಯನವರ ಮಗ ಛಾಯಾಪತಿಯವರು ಪ್ರಕಟಿಸಿದರು. ಅದಕ್ಕೆ ಸೊಗಸಾದ ಮುನ್ನುಡಿಯನ್ನು ಚದುರಂಗರು ಬರೆದುಕೊಟ್ಟರು. ಬಳಿಕ ಹಲವಾರು ಪತ್ರಿಕೆಗಳಿಂದ ವಿಶೇಷ ಸಂಚಿಕೆಗಳಿಗೆ ಲೇಖ ಕೋರಿ ಪತ್ರಗಳು ಬರಲಾರಂಭಿಸಿದವು. ಹೀಗಾಗಿ ಬರೆಯುತ್ತ ಹೋದೆ. 'ಹೀಗಿದ್ದೇವೆ ನಾವು' ಮತ್ತು 'ನಗೆ ಕೇದಿಗೆ' ಬೆಳಕು ಕಂಡವು.

ಹಾಸ್ಯ ಬರಹಗಳಿಗೊಬ್ಬ ನಾಯಕ ಬೇಕು. ಹಾಸ, ಪರಿಹಾಸ, ವಾಗ್ ಬಾಣಗಳ ಚುಚ್ಚಾಟಗಳನ್ನೆಲ್ಲ ಮುದ್ರಿತ ರೂಪದಲ್ಲಿ ಸಹಿಸಿಕೊಳ್ಳಲು ಒಬ್ಬ ಗಂಡುಗಲಿ ಬೇಕು! ಸಿಟ್ಟು, ಸೆಡವು, ನೋವು ಮಾಡಿಕೊಳ್ಳದೇ ಸಹಿಸಿ, ನಕ್ಕು ಬಿಡುವ ಸರಸವಿನೋದಿ ಬೇಕು. ಸುದೈವದಿಂದ ನನ್ನ ಮನೆಯಲ್ಲೇ ಅಂಥವರು ಇದ್ದರು! ನನ್ನ ಪತಿಯನ್ನೇ ಬರಹದ ನಾಯಕರಾದ 'ರಾಯ'ರನ್ನಾಗಿಸಿ, ಬರೆಯುತ್ತಿದ್ದೆ. ಅವರು ಸ್ವತಃ ಸಹಜವಾದ ತಿಳಿಹಾಸ್ಯ ರೂಢಿಸಿಕೊಂಡವರು. ಎಷ್ಟೋ ಬಾರಿ ಹಾಸ್ಯ ಸನ್ನಿವೇಶಗಳನ್ನು ಅವರಾಗಿಯೇ ನನಗೆ ಸೂಚಿಸಿದ್ದು ಇದೆ. ಅಂತೂ ನನ್ನ 'ಹಾಸ್ಯ ಲೇಖಕಿ' ಪಟ್ಟ ದೃಢಪಟ್ಟಿತು.

'ನಗೆ-ಕೇದಿಗೆ' ವರಕವಿ ಅಂಬಿಕಾತನಯದತ್ತರ ಕವಿತೆಯ ಸಾಲು, 'ನಗೀ ಕ್ಯಾದಗಿ'ಯಿಂದ ಪ್ರೇರಿತವಾಗಿದ್ದರೆ, ಅವರ ಇನ್ನೊಂದು ಸುಂದರ ಕವಿತೆಯೊಂದರಿಂದ 'ನಗೆ-ನವಿಲು' ಇಳಿಸಿದ್ದೇನೆ! "ನಾರಿ ನಿನ್ನ ಮಾರೀಮ್ಯಾಗ ನಗೀನವಿಲು ಆಡತಿತ್ತ!" ಎಂದಿದೆ ಆ ಸಾಲು. ತುಂಬ ದಿನಗಳ ಅಂತರದ ಬಳಿಕ ಪ್ರಕಟವಾಗುತ್ತಿರುವ 'ನಗೆ ನವಿಲು', ತಿಳಿಹಾಸ್ಯಪ್ರಿಯ ರಸಿಕರನ್ನು, ಸಹೃದಯರನ್ನು, ರಂಜಿಸಬಹುದು! ಎಂಬ ನಂಬಿಕೆಯಲ್ಲಿರುವೆ. ಇದರಲ್ಲಿರುವ ಲೇಖಗಳು ಕರ್ಮವೀರ, ಪ್ರಜಾವಾಣಿ, ನೂತನ, ಹೊಸತು, ಸುಧಾ, ಉದ್ಯಮದರ್ಶಿ, ಗೋಕುಲ, ಪತ್ರಿಕೆಗಳಲ್ಲಿ ಈ ಮೊದಲು ಪ್ರಕಟವಾಗಿವೆ. 'ಟ್ರಾನ್ಸ್‌ಫರ್ ಅವಾಂತರ', 'ಮಿಸ್ ಮಾಡದ ಬಸ್' ಮತ್ತು 'ಡ್ರೆಸ್ ಕೋಡ್'ಗಳು ಬೆಂಗಳೂರು ಆಕಾಶವಾಣಿ ಕೇಂದ್ರದಿಂದ ಪ್ರಸಾರವಾಗಿವೆ. ಇವರೆಲ್ಲರಿಗೆ ನಾನು ಋಣಿಯಾಗಿರುವೆ.

ಅಲ್ಪ ಸಮಯದಲ್ಲಿ ಈ ಪುಸ್ತಕ ಅಂದವಾಗಿ ಹೊರಬರುವಂತೆ ನೋಡಿಕೊಂಡ, ನವಕರ್ನಾಟಕ ಪಬ್ಲಿಕೇಷನ್ಸ್ ಇವರಿಗೆ ವಿಶೇಷ ಕೃತಜ್ಞತೆಗಳು ಸಲ್ಲುತ್ತವೆ.

ಬೆಂಗಳೂರು 15-08-2012.
(65ನೇ ಸ್ವಾತಂತ್ರ್ಯ ವರ್ಧಂತಿ)

ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್
110, ಶಶಿಕಿರಣ ಅಪಾರ್ಟ್‌ಮೆಂಟ್
18ನೇ ಕ್ರಾಸ್, ಮಲ್ಲೇಶ್ವರಂ
ಬೆಂಗಳೂರು- 560 055



ಡಾ॥ ಕೃಷ್ಣಾನಂದ ಲಕ್ಷ್ಮಣ ಕಾಮತ (1934–2002)

ಸಹಜ ವಿನೋದಿಗಳಾಗಿ
ನಗೆಬರೆಹಗಳಿಗೆ ಕಾರಣರಾಗಿ
ಕಣ್ಮರೆಯಾದ "ರಾಯರ" ನೆನಪಿಗೆ

**ಅರ್ಪಿತ**

– ಜ್ಯೋತ್ಸ್ನಾ –

# ಕನಸಿನ ಮನೆ

ಅಮೇರಿಕೆಯಲ್ಲಿ ಬೀಡುಬಿಟ್ಟಿರುವ ಪುತ್ರ ವಿಕಾಸನ ಧ್ವನಿ ಫೋನಿನಲ್ಲಿ ಒಮ್ಮಿಂದೊಮ್ಮೆ ಕೇಳಿದಾಗ, ಒಂದು ಕ್ಷಣ ಧಸ್! ಆಯಿತು. ವರ್ಷಾನುಗಟ್ಲೆ ನಡೆದು ಅಮೇರಿಕೆ ತೀರ ಅನಿಶ್ಚಿತ ಪರಿಸ್ಥಿತಿಯ ನಾಡು! ಏನಾದರೂ ಅನಾಹುತ ಆಗಿರಬಹುದೇ? ಎಂದು ಏದುಸುರಿಗೆ ಬಡಿದುಕೊಳ್ಳುತ್ತಿದ್ದ ಎದೆ, ಸಾಥ್ ಕೊಡುತ್ತಿದ್ದಾಗ, ಸಾವರಿಸಿಕೊಂಡು ಮಗನನ್ನು ಮಾತನಾಡಿಸಿದೆ. "ಗಾಬರಿಯಾಗಬೇಡಮ್ಮ! ನನ್ನ ಸಹಪಾಠಿ ಉಮೇಶನು ಕೊಂಚ ಸಮಯ ಮೊದಲು, ಹೊನ್ನಾವರದಿಂದ ಫೋನಿಸಿ, ನಿದ್ರೆಯಲ್ಲಿದ್ದ ನನ್ನನ್ನು ಎಬ್ಬಿಸಿ, ಮಾತನಾಡಿಸಿದ. ಅತ್ಯಂತ ಮಹತ್ವದ ವಿಚಾರವಾದ್ದರಿಂದ ನಾನೂ ಅವೇಳೆಯಲ್ಲಿ ನಿನಗೆ ತೊಂದರೆ ಕೊಡಬೇಕಾಯ್ತು. ಮೂರು ವರ್ಷ ಹಿಂದೆ ಹೊನ್ನಾವರಕ್ಕೆ ಹೋಗಿದ್ದಾಗ, ನಿಮಗೆ, ವಿಶ್ರಾಂತಿಗೆ, ಬರವಣಿಗೆಗೆ ಹೊಂದುವಂತಹ ಪ್ರಶಾಂತವಾದ ದೊಡ್ಡ ಹಿತ್ತಲು, ಚೊಕ್ಕಮನೆಯನ್ನು ಕೊಳ್ಳುವ ನನ್ನ ಆಸೆಯ ಬಗ್ಗೆ ಹೇಳಿದ್ದೆ. ಅಂತಹ ಮನೆಯೊಂದು ಸದ್ಯದಲ್ಲಿ ಮಾರಾಟಕ್ಕಿದೆ! ಎಂದು ತಿಳಿಸುವ ತವಕ ಅವನಿಗೆ. ಮನೆ ಕುರಿತಾದ ಅವನ ಸವಿಸ್ತಾರ ವರ್ಣನೆ ಕೇಳಿ ಹಿಗ್ಗಿಹೋದೆ. ಸಾಧ್ಯವಿದ್ದರೆ ಇಂದೇ ಪ್ಲೇನ್ ಹತ್ತಿ ಬಂದು ಬಿಡೋಣವೇ! ಅನಿಸಿತ್ತು. ಆದರೆ ಬಾಪ್ಪಾರು ಸದಾಕಾಲ ಶಿಸ್ತು, ಸಂಯಮಗಳನ್ನು ಬೋಧಿಸುತ್ತಲೇ ಇರುವವರು. ಆದ್ದರಿಂದ ಹೊರಟು ಬಂದು ಬೈಯಿಸಿಕೊಳ್ಳುವದು ಬೇಡವೆಂದು, ತಕ್ಷಣ ಹೊಳೆದ ವಿಚಾರವನ್ನು ಕಾರ್ಯಗತ ಮಾಡುವ ಗೊಡವೆಗೆ ಹೋಗದೇ ಫೋನಿಸಿದೆ" ಎಂದು ಹೇಳಿದ. ಇಷ್ಟೊಂದು ಬೆಳೆದು ನಿಂತ ಮಗನು ಇನ್ನೂ ತಂದೆಗೆ ಹೆದರುತ್ತಿದ್ದಾನೆಂದು ಖುಷಿಯಾದರೂ, ಅವರಿಂದಾಗಿ ಇವನು ಭಾರತಕ್ಕೆ ಬರುವದು ತಪ್ಪಿತಲ್ಲ! ಎಂದು ವ್ಯಥೆಯೂ ಆಯಿತು. ನಂತರ ಆತ ಹೇಳಿದ ವಿಷಯ ಸಂಕ್ಷೇಪದಲ್ಲಿ ಹೀಗಿತ್ತು:

"ಹಿಂದಿನ ಸಲ ಹೊನ್ನಾವರಕ್ಕೆ ಹೋದಾಗ ನನ್ನ ಬಾಲ್ಯಸ್ನೇಹಿತ ಉಮೇಶನೊಂದಿಗೆ ನನ್ನ ಅಂತರಂಗದ ಕೆಲ ವಿಚಾರಗಳನ್ನು ತೋಡಿಕೊಂಡಿದ್ದೆ. ತಂದೆ ತಾಯಿಗಳ ಒಬ್ಬನೇ ಮಗನಾಗಿದ್ದರಿಂದ ಅವರು ನನ್ನ ಸುತ್ತ ಹತ್ತು ಹಲವು ಕನಸಿನ ರಾಜ್ಯ ಕಟ್ಟಿದ್ದರು. ಆದರೆ ನಾನು ಉಚ್ಚ ಶಿಕ್ಷಣಕ್ಕೆಂದು ಇಲ್ಲಿ ಬಂದು ಇಲ್ಲಿಯೇ ನೆಲೆಸುವ ನಿರ್ಣಯ ಕೈಕೊಂಡು ಅವರ ಕನಸುಗಳೆಲ್ಲ ಕುಸಿದು ನೆಲ ಸಮವಾದವು. ಆದರೆ ಎಂದೂ ಅವರು ನನ್ನ ಭವಿಷ್ಯವನ್ನು ನಾನು ರೂಪಿಸಿಕೊಳ್ಳುವದರಲ್ಲಿ ಅಡ್ಡಿಯನ್ನು ಒಡ್ಡಿದವರೇ ಅಲ್ಲ. ಅವರ ವೃದ್ಧಾಪ್ಯ ನೆಮ್ಮದಿಯದಾಗಿರಬೇಕೆಂದು ನನ್ನ ಕನಸು. ನನ್ನ ತಂದೆ ಈ ಇಳಿ ವಯಸ್ಸಿನಲ್ಲಿಯೂ ಪ್ರತಿದಿನ ರಾಶಿರಾಶಿ ಸಾಮಾನು ತರಕಾರಿಗಳನ್ನು ಹೊತ್ತು ತರುತ್ತಾರೆ. ಬ್ಯಾಂಕ್, ಅಂಚೆ, ಕೆ.ಇ.ಬಿ.ಗಳಿಗೆಲ್ಲ ಅವರೇ ಓಡಾಡಬೇಕು. ನನ್ನ ತಾಯಿಗೆ ಸಂಧಿವಾತ ಕಾಡುತ್ತಿದ್ದರೂ, ಯಾರೊಬ್ಬರ ಸಹಾಯವೂ ಇಲ್ಲದೇ ಮನೆಯ ಸಕಲ ಕೆಲಸಗಳನ್ನೂ ನಿಭಾಯಿಸುವದರಿಂದ ನನ್ನ ಕರುಳು ಕಿವುಚಿದಂತಾಗುತ್ತದೆ. ಮನುಷ್ಯತ್ವವೇ ಇಲ್ಲದ

ಬೆಂಗಳೂರಿನಲ್ಲಿ, ಹೊತ್ತಿಗಾಗುವವರು ಒಬ್ಬರೂ ಇಲ್ಲ! ಆದ್ದರಿಂದ ನಮ್ಮೂರಾದ ಹೊನ್ನಾವರದಲ್ಲಿ, ಪರಿಚಿತ ಪರಿಸರದಲ್ಲಿ ಅವರು ನೆಲೆಸಿ ಬೆಂಗಳೂರಿಗೆ ವಿದಾಯ ಹೇಳಬೇಕು ಎಂದು ಆಲೋಚಿಸಿದ್ದೇನೆ! ಅವರ ಅಭಿರುಚಿಗೆ ಹೊಂದುವ ಸರಿಯಾದ ಮನೆಯನ್ನು ಹುಡುಕಿಡು' ಎಂದು ಅರುಹಿದ್ದೆ. ಅಲ್ಲದೇ ಆಗೊಮ್ಮೆ ಈಗೊಮ್ಮೆ ನಾನು ಭಾರತಕ್ಕೆ ಬಂದರೆ ವಿರಾಮದ ದಿನಗಳನ್ನು ಕಳೆಯುವ ವಿಶ್ರಾಂತಿ ಧಾಮವೂ ಅದಾಗಬೇಕು ಎಂದು ಹೇಳಿದ್ದೆ. ಈಗ ನಾನು ಬೇಕೆಂದು ಕೇಳಿದ ಸಕಲ ಅಂಶಗಳನ್ನೂ ಹೊಂದಿದ ಕನಸಿನ ಮನೆಯೊಂದು ಮಾರಾಟಕ್ಕಿದೆ! ಎಂದು ಗೆಲುವಿನಿಂದ ಗೆಳೆಯನು ಫೋನಿಸಿದ್ದಾನೆ. ಮನೆ ಹೇಗಿದೆ ಗೊತ್ತೇ?

ಕರಾವಳಿಯನ್ನು ಬೆಳಗುವ ಶರಾವತಿ, ಸಮುದ್ರರಾಜನನ್ನು ಕೂಡಿಕೊಳ್ಳುವ ಅಪೂರ್ವ ತಾಣದಲ್ಲಿದೆ! ಅಂತೆಯೇ ಒಂದು ಕಡೆ ಅಬ್ಬರಿಸುವ ಕಡಲು, ಇನ್ನೊಂದು ಕಡೆ ಶಾಂತವಾಗಿ ಹರಿಯುವ ಶರಾವತಿ, ನದಿಯಲ್ಲಿ ಹಗಲು ರಾತ್ರೆ ಓಡಾಡುವ, ಸದ್ದಿಲ್ಲದ ನಾವೆಗಳು. ಸಮುದ್ರದಲ್ಲಿ ತೇಲುತ್ತಿರುವಂತೆ ಭಾಸವಾಗುವ ಕೆಳದಿಯ ಬಸವರಾಜನು ಕಟ್ಟಿಸಿದ ಜಲದುರ್ಗ, ಸದಾಕಾಲ ಕೈಎತ್ತಿ ಕರೆಯುತ್ತಲೇ ಇರುತ್ತದೆ. ಮೂಡಣದಿಕ್ಕಿನಲ್ಲಿ ಮೂಡುವ ಸೂರ್ಯನ ಕಿರಣಗಳು ಮೊದಲು ಈ ಮನೆಯನ್ನು ಮುತ್ತಿಡುತ್ತವೆ! ಅಟ್ಟದ ಕಿಟಕಿಯಿಂದ ಸೂರ್ಯಾಸ್ತದ ಕೆಂಗಿರಣಗಳನ್ನು ವೀಕ್ಷಿಸಬಹುದು!"

ವಿಕಾಸನ ಧ್ವನಿ ದಿಗಂತದಾಚೆಯಿಂದ ಕೇಳಿಬರುತ್ತಲೇ ಇತ್ತು. ನನ್ನೆದುರು ಕನಸಿನಧಾಮ ರೂಪಗೊಳ್ಳುತ್ತ ಗಟ್ಟಿಯಾಗಿ ನಿಂತುಬಿಟ್ಟಿತು. "ಸರಿಯಾಯ್ತು ಕಣೋ! ನನಗೆ ಪೂರ್ಣ ತೃಪ್ತಿಯಾಯಿತು. ಆದರೆ ರಾಯರನ್ನು ಒಲಿಸುವ ಜವಾಬ್ದಾರಿ ಹೇಗೋ..." ಎಂದು ಅನುಮಾನಿಸಿದಾಗ "ಅಮ್ಮಾ, ಆ ಯೋಚನೆ ಬಿಡು. ಅವರ ಫೋಟೋಗ್ರಾಫಿಗೆ ಬೇಕಾಗುವ ಗ್ರಾಸ ಸಮೃದ್ಧವಾಗಿದೆ ಅಲ್ಲಿ. ಆ ನಿಸರ್ಗ, ತೆಂಗಿನತೋಪು, ಸೈಹ್ಯಾದ್ರಿ, ಕಡಲು, ನದಿ, ನಾವೆ ಸೀನರಿಗಳ ವೈವಿಧ್ಯ, ರಂಗುರಂಗಿನ ಹಾಲಕ್ಕಿ, ಗೊಂಡ, ಸಿದ್ಧಿ, ಖಾರ್ವಿ, ಜನಾಂಗಗಳು, ಇವನ್ನೆಲ್ಲ ಅರಿಯದವರೇ? ನಿನ್ನನ್ನು ಕಾಣುವ ಮೊದಲು, ನಾನು ಹುಟ್ಟುವ ಮೊದಲ ಯುಗದಿಂದಲೂ ಜಿಲ್ಲೆಯ ಪಶು, ಪಕ್ಷಿ, ಮತ್ಸ್ಯ ವೈವಿಧ್ಯಗಳನ್ನು ಕ್ಲಿಕ್ಕಿಸುತ್ತ ಬಂದವರು ಅವರು. ಇಂಥ ಅವಕಾಶ ಹುಸಿಹೋಗಗೊಟ್ಟಾರೆಯೇ? ಆದರೂ ಬೆಸ್ಟ್ ಆಫ್ ಲಕ್!" ಎಂದು ಮಾತು ಮುಗಿಸಿದ.

ಆದರೆ ರಾಯರು ಈ ನಿಟ್ಟಿನಲ್ಲಿ ಅತ್ಯಂತ ವ್ಯಾವಹಾರಿಕವಾಗಿ ವರ್ತಿಸುವವರು. ಗಾಳಿ ಗೋಪುರ ಕಟ್ಟುವವರಲ್ಲ. ಅವನ್ನು ಕಟ್ಟುವವರನ್ನು ನಂಬುವವರೂ ಅಲ್ಲ. ಅಂತೆಯೇ ಈ ಪ್ರಸ್ತಾಪ, ಎತ್ತಿದೊಡನೆಯೇ ಪುಂಖಾನುಪುಂಖವಾಗಿ ಪ್ರಶ್ನೆಗಳನ್ನು ಎತ್ತಲಾರಂಭಿಸಿದರು. ಎಂಥಜಾಗ? ಎಷ್ಟು ಅಗಲಳತೆ? ಕೃಷಿಭೂಮಿ ಅಲ್ಲವಷ್ಟೇ? ಎಷ್ಟು ತೆಂಗಿನ ಮರಗಳಿವೆ? ಹ್ಯಾವೇ ಎಲ್ಲಿ? ಆಸ್ಪತ್ರೆಗೆ ದೂರವೇ? ಅವರು ಹುಟ್ಟಿ ಬೆಳೆದ ಊರಿನ ವಿಚಾರ ಅವರಿಗೇ ಚೆನ್ನಾಗಿ ಗೊತ್ತಿದ್ದರೂ ನನ್ನನ್ನು ಪೇಚಿಗೆ ಸಿಕ್ಕಿಸುವ ಉದ್ದೇಶ ಇದೆಂದು ಅರ್ಥಮಾಡಿಕೊಂಡು ಮುನಿದು ಕುಳಿತುಬಿಟ್ಟೆ. (ಅವರ ಯಾವ ಪ್ರಶ್ನೆಗೂ ನನ್ನಲ್ಲಿ ಉತ್ತರವಿರಲಿಲ್ಲವೆಂಬುದು ಗುಟ್ಟಿನ ವಿಚಾರ!) ಮಗನು ಸಾವಿರಾರು ಡಾಲರ್‌ಗಳನ್ನು ಸುರಿದು ಆಸ್ತಿಯ ಖರೀದಿಗೆ ಇಲ್ಲಿ ಬರುವದಕ್ಕಿಂತ ನಾನೇ ನೂರಾರು ರೂಪಾಯಿಗಳಲ್ಲೇ ಊರಿಗೆ ಹೋಗಿ, ಇಸ್ಟೇಟನ್ನು ಪ್ರತ್ಯಕ್ಷ ಕಂಡು ಪರಾಮರ್ಶಿಸಿ ಬರುವದು ಸಮರ್ಪಕವೆಂದು ನಿರ್ಧರಿಸಿ ಹೊರಟೇ ಬಿಟ್ಟರು. ಜಿಕೇರಿಯ ಸ್ವಭಾವದ ರಾಯರು,

ಸಂಬಂಧಿತ ವ್ಯಕ್ತಿಗಳೊಂದಿಗೆ ಸರಿಯಾಗಿ ಸಂಪರ್ಕಿಸಿ, ಬೆಲೆಯನ್ನು ನಿರ್ಧರಿಸುವ ಮುನ್ನ ಬೇರೆ ಯಾರಾದರೂ ಮೇಲಾಡಿಸಿ, ಸ್ಪರ್ಧೆಯಿಂದ ಅದನ್ನು ಕೊಂಡುಕೊಂಡು ಬಿಟ್ಟರೆ ಗತಿ? ಎಂಬ ಕಳವಳ ಪ್ರಾರಂಭವಾಯಿತು. ಹಾಗಾಗದಿರಲಿ, ಎಂದು ಸಂಕಟಕಾಲದಲ್ಲಿ ಕಾಯುವ ದೇವರೆಂದು ಪ್ರಸಿದ್ಧನಾಗಿರುವ ವೆಂಕಟರಮಣನಿಗೆ ತುಪ್ಪದ ದೀಪ ಹೊತ್ತಿಸಿ ಹರಕೆ ಹೊತ್ತೆ. ಈ ನಡುವೆ ವಿಕಾಸನು ಮೂರು ಬಾರಿ, ಪ್ರಗತಿಯನ್ನು ವಿಚಾರಿಸಲು ಫೋನಿಸಿದ. ಆದರೆ ರಾಯರು ತಾವು, ಕಂಡದ್ದು, ಕೇಳಿದ್ದು, ನಿರ್ಧರಿಸಿದ್ದು ಕುರಿತು ಒಂದಾದರೂ ಅಂಚೆಕಾರ್ಡನ್ನು, ಮಗನಿಗಲ್ಲ, ನನಗೂ ಬರೆಯುವ ಸೌಜನ್ಯ ತೋರಲಿಲ್ಲ. ಎಷ್ಟು ನಿಷ್ಠುರರು! ಎಂದು ಅನಿಸದೇ ಇರಲಿಲ್ಲ.

ನಾಲ್ಕೇ ದಿನಗಳಲ್ಲಿ ರಾಯರು ಊರಿಗೆ ಹೋಗಿ, ಮಾರಲಿದ್ದ ಆಸ್ತಿ ಕುರಿತು ಸಕಲ ಮಾಹಿತಿಯನ್ನು ಸಂಗ್ರಹಿಸಿ, ಓಡಾಡಿ, ಬಳಲಿ, ರಾತ್ರಿ ಪ್ರವಾಸ ಕೈಕೊಂಡು ವಾಪಸ್ಸಾಗಿದ್ದರು. ಹೋದ ಕೆಲಸ ಏನಾಯಿತು? ಎಂದು ಕೇಳುವ ಆತುರವಿದ್ದರೂ ದಣಿದು ಬಂದವರ ಊಟ-ಉಪಚಾರಗಳತ್ತ ಲಕ್ಷ್ಯ ಮೊದಲಿಗೆ ಪೂರೈಸಿದೆ. ಕಳೆದ ಒಂಬತ್ತು ವರ್ಷಗಳಲ್ಲಿ ತಾವಾಗಿ ಒಮ್ಮೆಯೂ ಮಗನಿಗೆ ಫೋನಿಸದೇ ಇದ್ದವರು, ವಿರಮಿಸಿ ಎದ್ದವರೇ, ಮಗನ ಫೋನ್‌ನಂಬರು ತಿರುವಲು ಪ್ರಾರಂಭಿಸಿದಾಗ ನಂಬಲು ಸಾಧ್ಯವಾಗಲೇ ಇಲ್ಲ! ಅದು, ಇದು ಮಾತನಾಡದೇ ನೇರವಾಗಿ ಮನೆಕುರಿತ ವಿವರಗಳನ್ನು ಹೇಳಲಾರಂಭಿಸಿದರು. 'ಈ ಮನೆ ಇರುವದು ಹೊನ್ನಾವರದ ಬೆಲ್ಲೊಂಡ್‌ದಲ್ಲಿ! ಹಾಲಂಡ್‌ನಂತಹ ಸಮೃದ್ಧ ಪ್ರದೇಶ ಅದೆಂದು, ನೀನು ಭ್ರಮೆ ಪಡದಿರು. ಸುಶಿಕ್ಷಿತರು, ನಾಗರಿಕರು ಓಡಾಡುವ ಜಾಗ ಅದಲ್ಲ! ಅಲ್ಲಿ ಶರಾವತಿಯೂ ಇಲ್ಲ, ಸಮುದ್ರವೂ ಇಲ್ಲ! ಮೀನು ಪೇಟೆಯಿಂದ ಹರಿಯುವ ಕೊಳಚೆ ನೀರು ಅಲ್ಲಿ ಕೋಡಿಯಾಗಿ ಹರಿಯುತ್ತದೆ. ಕೆಸರಕೋಡಿಯೆಂಬ ಅನ್ವರ್ಥಕ ನಾಮ ಪಡೆದಿದೆ. ಸುತ್ತಮುತ್ತಲ ನಿವಾಸಿಗಳಿಗೆ ನಿದ್ರೆಬಾರದಂತೆ ಬಲುದೊಡ್ಡ ಪ್ರಮಾಣದಲ್ಲಿ ಸೊಳ್ಳೆ ನಿರ್ಮಾಣ ಕೇಂದ್ರವಾಗಿ ಮಾರ್ಪಟ್ಟಿದೆ! ಒಳ್ಳೆಯ ಮೀನು ಖರೀದಿಸಿ ಒಯ್ದು ಬಳಿಕ ಮುಗ್ಗಿದ, ಕೊಳೆತ, ಮೀನು ಅಲ್ಲಿಯೇ ಬಿಸಾಕುವದರಿಂದ ಸದಾಕಾಲ ದುರ್ಗಂಧವು ತಾಂಡವವಾಡುತ್ತಿದೆ.... ಮಾರಾಟಕ್ಕಿದ್ದ ಮನೆಯ ಕುರಿತು ದೀರ್ಘವಾದ ಪ್ರಬಂಧವನ್ನೇ ಬರೆಯಬಹುದಾಗಿದೆ. ಹೆದ್ದಾರಿಯಿಂದ ದೂರವಿದೆ ನಿಜ! ತಲುಪಲು ನೇರ ದಾರಿಯೇ ಇಲ್ಲ. ಸಿಕ್ಕಸಿಕ್ಕವರ ದಣಪೆ, ಹಿತ್ತಿಲ ಒಳಗಿಂದ ಹಾಯ್ದು ಹೋಗಬೇಕು. ಒಂದೆಡೆ ಮೀನುಗಾರರಿಗೆ ಚಾ, ತಿಂಡಿ ಮಾರುವ ಅಂಗಡಿ, ಇನ್ನೊಂದು ಬೆಲ್ಲದುಂಡಿ, ಹೂಸಿನ ಗೆಡ್ಡೆ (ಬೇಯಿಸಿದ ಸಿಹಿಗೆಣಸಿಗೆ ಸ್ಥಳೀಯರಿಟ್ಟ ಹೆಸರು) ಮಾರುವ ಅಂಗಡಿಯಿದೆ. ಇನ್ನೊಂದು ದಿಕ್ಕಿನಲ್ಲಿ ಮೀನುಗಾರರು ನದಿದಂಡೆ ಅತಿಕ್ರಮಣ ಮಾಡಿ, ಗುಡಿಸಲು ಕಟ್ಟಿಕೊಂಡಿದ್ದಾರೆ. ಆ ಕುರಿತು ಕೋರ್ಟಿನಲ್ಲಿ ವ್ಯಾಜ್ಯ ನಡೆಯುತ್ತಿದೆ. ಎದುರಿಗೆ ಮುಖ್ಯವಾಗಿ ಮೀನುಗಾತಿಯರು ಜಲಬಾಧೆ ತೀರಿಸಿಕೊಳ್ಳುವ ತಾಣ. ಸೂರ್ಯಾಸ್ತ ವೀಕ್ಷಣೆಯ ಸ್ಥಳವೆಂದು ಹೇಳಿದ ನಾಲ್ಕನೆಯ ಸ್ಥಳ ಸಾರ್ವಜನಿಕರೆಲ್ಲರೂ ಬಳಸುವ ಸುಲಭ, ಮುಕ್ತ ಶೌಚಾಲಯ! ಅರ್ಧಭಾಗ ಗಂಡಸರಿಗೆ, ಅರ್ಧಭಾಗ ಹೆಂಗಸರಿಗೆ ಮೀಸಲಾಗಿದೆ. ಭಾರತ ಸ್ವಾತಂತ್ರ್ಯ ಪೂರ್ವಯುಗದಿಂದಲೂ ಈ ಶೇಕಡಾ ಐವತ್ತು ಮೀಸಲಾತಿ ಯಾವ ಚರ್ಚೆ, ಅಡ್ಡಿ ಆತಂಕಗಳಿಲ್ಲದೇ ಮುಂದುವರಿದು ಬಂದಿದೆ!'

ಮನೆಕೊಳ್ಳುವ ಆಸೆಯಿಂದ ಇಸ್ಟೇಟ್ ನೋಡಲು ಬಂದಿದ್ದಾರೆ! ಎಂಬ ಸಮಾಚಾರ,

ಮಾಲಕ ಶೀನಮಾಮರಿಗೆ ತಲುಪಿ, ಸ್ವತಃ ಅವರೇ ಬಂದು ಕರೆದುಕೊಂಡು ಹೋದರು. 'ತಮ್ಮ ಆಸ್ತಿ, ಮನೆ, ಎರಡೂ ಆಯಕಟ್ಟಿನ ಸ್ಥಳದಲ್ಲಿ ಇದ್ದುದರಿಂದ ವಿಪರೀತ ಬೇಡಿಕೆ ಇದೆ' ಎಂದರು. ಇದಕ್ಕೆ ಕಾರಣ ಪಶ್ಚಿಮ ಕರಾವಳಿಯ ರಾಷ್ಟ್ರೀಯ ಹೆದ್ದಾರಿ, ಮನೆಯ ಮುಂದಿನಿಂದಲೂ ಕೊಂಕಣ ರೇಲ್ವೆ ಮಾರ್ಗ ಮನೆಯ ಹಿಂದಿನ ದಿಕ್ಕಿನಿಂದಲೂ ಹಾಯ್ದು ಹೋಗುತ್ತಿವೆ. ಇದಾಗಲೇ ಇಪ್ಪತ್ತು ಲಕ್ಷ ರೂಪಾಯಿಗಳನ್ನು ಕೊಡಲು ಮುಂದೆ ಬಂದವರಿದ್ದಾರೆ. ಆದರೆ ನಮ್ಮವರಿಗೇ ಕೊಡಬೇಕು ಎಂದು ನನ್ನ ಮನದಾಶಯ! ಹೆಚ್ಚು ಕಡಿಮೆ ಅಷ್ಟಕ್ಕೆ ನಿಮಗೇ ಕೊಡೋಣವಂತೆ. ಆದರೆ ಕೂಡಲೇ ಮನೆ ಖಾಲಿ ಮಾಡುವಂತೆ ಇಲ್ಲ. ಹತ್ತಿರದ ಕರ್ಕಿಯಲ್ಲಿ ಒಂದು ಹಿತ್ತಲು ಕೊಳ್ಳಬೇಕೆಂದಿದ್ದೇವೆ. ಅರ್ಧಬೆಲೆಯನ್ನು ನೀವು ಮುಂಗಡವಾಗಿ ಕೊಟ್ಟರೆ, ಅಲ್ಲಿ ಮನೆಕಟ್ಟಿಸಿ ಬಿಡಾರವನ್ನು ಅಲ್ಲಿ ಸಾಗಿಸಿದ ಬಳಿಕ ಈ ಆಸ್ತಿ ನಿಮ್ಮದಾಗುವದು! ಎಂದು ದೇಶಾವರಿ ನಗೆನಕ್ಕರು. ಒಗ್ಗರಣೆಯವಲಕ್ಕಿ-ಕಷಾಯಗಳ ಆತಿಥ್ಯ ಒದಗಿಸಿದರು. ಮಾತುಕತೆ ಪಕ್ಕಾ ಆಗಲಿ! ಎಂದು ಆಗ್ರಹಿಸಿದರು. ಮಗನೊಂದಿಗೆ ವಿಚಾರವಿಮರ್ಶೆ ಮಾಡಿ ಬೇಗನೆ ನಮ್ಮ ನಿರ್ಧಾರ ತಿಳಿಸುತ್ತೇನೆ, ಎಂದು ವಾಗ್ದಾನ ಮಾಡಿ ಹೊರಬಂದಾಗ, ಬದುಕಿದೆಯ ಬಡಜೀವ! ಅನಿಸಿತ್ತು.

ನಿನ್ನ ಸಹಪಾಠಿ ಉಮೇಶನನ್ನು ಸಂಪರ್ಕಿಸಿದೆ. ಅವನು ನೀಡಿದ ಮಾಹಿತಿ ಸಂಪೂರ್ಣ ಸುಳ್ಳಾಗಿರಲು ಕಾರಣ ವಿಚಾರಿಸಿದೆ. ಅವನು ನೀಡಿದ ವಿವರಗಳು ಹೀಗಿವೆ: "ಶೀನಮಾಮನ ಮಗ ನನ್ನ ಸ್ನೇಹಿತ. ಇತ್ತೀಚಿಗೆ ಮನೆಗೆ ಕರೆದೊಯ್ದು ತನ್ನ ನಿವಾಸದ ಪರಿಸರವನ್ನೆಲ್ಲ ತೋರಿಸಿದ. ನೋಡಿ ಮೆಚ್ಚಿ ನಿನಗೆ ವಿವರ ಪೂರೈಸಿದ್ದು ಈ ಪರಿಸರದ್ದು! ತನ್ನ ಪಿತ್ರಾರ್ಜಿತ ಆಸ್ತಿ ಮಾರಾಟಕ್ಕಿದೆ ಎಂದೂ ಹೇಳಿದ. ನಾನು ನೋಡಿ, ಪಸಂದಾಗಿದ್ದ ಆಸ್ತಿಯೇ ಮಾರಾಟಕ್ಕಿದೆ ಎಂದು ಭ್ರಮಿಸಿದ್ದು ನನ್ನ ಬೆಪ್ಪುತನ! ಅವನು ಹೊಸಮನೆ ಕಟ್ಟಿ ಮೈ ಎಲ್ಲ ಸಾಲ ಮಾಡಿಕೊಂಡದ್ದರಿಂದ ತನ್ನ ಪಾಲಿನ ಪಿತ್ರಾರ್ಜಿತ ಆಸ್ತಿಯನ್ನು ಮಾರಿ ಸಾಲ ತೀರಿಸುವ ಹವಣಿಕೆಯಲ್ಲಿದ್ದಾನೆ. ಆದರೆ ಅವನ ಸೋದರ ಸೋದರಿ, ತಂದೆ ಇದನ್ನು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಆಸ್ತಿಯನ್ನು ಅತಿಕ್ರಮಣ ಮಾಡಿದವರನ್ನು ಸುಲಭವಾಗಿ ಖಾಲಿ ಮಾಡಲು ಸಾಧ್ಯವೂ ಆಗಿಲ್ಲ. ಮೀನುಗಾರರ, ಸಾರ್ವಜನಿಕರ ಚಟುವಟಿಕೆಗಳನ್ನು ನಿಯಂತ್ರಿಸುವದೂ ಸಾಧ್ಯವಿಲ್ಲ. ಮಾರಾಟಕ್ಕಿದೆ, ಎಂದು ಪ್ರಚಾರ ಮಾಡಿದ್ದು. ಹಾಗೂ ನಾನು ನೋಡಿ ಬಂದದ್ದು ಈ ಜಾಗವನ್ನು! ತಪ್ಪು ಮಾಹಿತಿ ಪೂರೈಸಿ ನಿಮಗೆಲ್ಲ ತೊಂದರೆ ಕೊಟ್ಟ ಬಗ್ಗೆ ಕ್ಷಮಿಸಿ" ಎಂದು ವಿಷಾದ ವ್ಯಕ್ತಪಡಿಸಿದ.

'ನೀನು ಕಲ್ಪನೆಯಲ್ಲಿ ಕಂಡ ನೈಸರ್ಗಿಕ ದೃಶ್ಯಗಳು ಒಂದು ದೃಷ್ಟಿಯಲ್ಲಿ ಅಪರೂಪದವೇ ಕಣೋ! ಜಲಬಾಧೆ ದೇಹಬಾಧೆಗಳಂತಹ ನೈಸರ್ಗಿಕ ನೋಟಗಳನ್ನು ದೂರದಿಂದ ಬಾಧೆಯಿಲ್ಲದೆ ಕ್ಲಿಕ್ಕಿಸಬಹುದು! ಸ್ತ್ರೀಪುರುಷ ಸಮಾನತೆಯನ್ನು ಸಾಧಿಸಿದ ಒಂದು ಅಪರೂಪ ವಿಧಾನವನ್ನು ಅಭ್ಯಸಿಸಬಹುದು! ಕೆಸರಕೋಡಿಯ ನಿಸರ್ಗಧಾಮದ ಬಹುವಿಧ ಚಟುವಟಿಕೆಗಳನ್ನು ಸೊಳ್ಳೆಕಡಿತ ಸಹಿತ ಅನುಭವಿಸಿ ಆನಂದಿಸಬಹುದು!' ಎಂದು ಜೋರಾಗಿ ನಕ್ಕಾಗ ಆ ಕೊನೆಯಿಂದ ವಿಕಾಸನೂ ಗಹಗಹಿಸಿ ನಕ್ಕಂತೆ ಭಾಸವಾಯಿತು.

ನಿನಗೆ 'ಈ ಕನಸಿನ ಮನೆ ಕೊಳ್ಳುವದಿದ್ದರೆ, ಖಜಾನೆಯೊಂದಿಗೆ ಈ ಕೂಡಲೇ ಹೊರಟುಬಿಡು!' ಎಂದು ಮನಸ್ವೀ ನಕ್ಕು ರಾಯರು ಮಾತು ಮುಗಿಸಿದರು. ಶಿಕ್ಷಣ, ಪದವಿಗಳಿಗಿಂತ ಲೋಕ ವ್ಯವಹಾರ ಮುಖ್ಯ ಎಂಬುದನ್ನು ಇನ್ನೊಮ್ಮೆ ಸಾರಿದರು.

■

# ಕ್ಯಾಮರಾ ಜೋಗಿ!

ಒಂದು ಬೆಳಿಗ್ಗೆ ವೃತ್ತಪತ್ರಿಕೆಯನ್ನು ಕೈಗೆತ್ತಿಕೊಳ್ಳುತ್ತಿದ್ದಂತೆ, 'ಮಲ್ಲೇಶ್ವರಂದಲ್ಲಿ ಮಕ್ಕಳ ಕಳ್ಳನ ಹಾವಳಿ!' ತಲೆಬರಹವನ್ನು ರಾಯರಿಗೆ ಕೇಳಿಸುವಂತೆ ಓದಿದೆ. "ಮಕ್ಕಳು ಹುಟ್ಟುವ ವೇಗದಲ್ಲಿ ಧನ-ಧಾನ್ಯ ಬೆಳೆಯದ ದೇಶದಲ್ಲಿ ಮಕ್ಕಳ ಕಳ್ಳರಿರುವದು ತೀರ ಆಶ್ಚರ್ಯಕರ! ಮಕ್ಕಳುಮರಿಗಳೇ ಸಂಪತ್ತೆಂದು ಪರಿಗಣಿಸಿದ್ದರಿಂದ ಇಂಥ ಕಳ್ಳರಿಗೆ ಹೆಚ್ಚಿನ ಆಕರ್ಷಣೆ ಇದ್ದಿರಬೇಕು!...ನಮ್ಮ ಮನೆಯಲ್ಲಿ ಬೆಳೆಯುವ ಮಕ್ಕಳಾಗಲಿ, ಮೊಮ್ಮಕ್ಕಳಾಗಲಿ ಇಲ್ಲದ್ದರಿಂದ ತಲೆಕೆಡಿಸಿಕೊಳ್ಳಬೇಕಾಗಿಯೇ ಇಲ್ಲ!" ಎಂದು ಈ ಸಮಾಚಾರದ ಮೇಲೆ ತಮ್ಮ ತೀರ್ಪನ್ನಿತ್ತು ರಾಯರು ಅಂಚೆ ಆಫೀಸಿಗೆ ಹೊರಟರು. ಕೆರಳಿದ ಕುತೂಹಲದಿಂದ ವಿವರಗಳ ಮೇಲೆ ಕಣ್ಣಾಡಿಸಿದಾಗ, ನಾಲ್ಕೇ ಸಾಲು ಮುದ್ರಿತ ಅಕ್ಷರಗಳು. ಚಿತ್ರ ಮತ್ತು ವಿವರಗಳಿಗೆ ಒಂಭತ್ತನೇ ಪುಟಕ್ಕೆ ತಿರುವಿರಿ! ಎಂಬ ಮಾಮೂಲು ಸೂಚನೆ ಇತ್ತು. ಸ್ನಾನ, ಅಡಿಗೆ ಮುಗಿಸಿ, ವಿರಾಮವಾಗಿ ಓದೋಣವೆಂದು ವೃತ್ತಪತ್ರಿಕೆಯನ್ನು ಸೋಫಾದ ಮೇಲೆ ಬಿಸುಟು ಮನೆಗೆಲಸಗಳಲ್ಲಿ ಮಗ್ನಳಾದೆ.

ಒದ್ದೆ ತಲೆಕೂದಲನ್ನು ಪಂಜಿ ಸುತ್ತಿ ಹಿಂಡಿಕೊಳ್ಳುತ್ತ ಕುತೂಹಲ ತಡೆಯಲಾರದೇ ತಿರುಗಿ ದಿನಪತ್ರಿಕೆ ಎತ್ತಿಕೊಂಡು ಹೆಚ್ಚಿನ ವಿವರಗಳಿಗಾಗಿ ಆ ಪುಟ ತೆರೆದಾಗ, ಕಣ್ಣಿಗೆ ಬಿದ್ದ ಛಾಯಾಚಿತ್ರ ಮನಸ್ಸನ್ನು ಘಾಸಿಗೊಳಿಸಿತು. ಚಿಕ್ಕವಯಸ್ಸಿನ ತಾಯಿಯೊಬ್ಬಳು ಮಗನನ್ನು ಕಳೆದುಕೊಂಡ ಆಘಾತ ತಾಳಿಕೊಳ್ಳದೇ ಎದೆಬಡಿದುಕೊಂಡು ಬಿಕ್ಕಿಬಿಕ್ಕಿ ಅಳುತ್ತಿದ್ದಾಳೆ. ಆಪಾದಿತನ ಕುರಿತು, ಪಾಲಕರು ಪೋಲಿಸರಿಗೆ ಇತ್ತ ಹೇಳಿಕೆಯನ್ನು ಓದಲಾರಂಭಿಸಿದಾಗ ದಿಙ್ಮೂಢಳಾದೆ. ಯಾಕೋ, ಇದರಲ್ಲಿ ರಾಯರ ಪಾತ್ರ ಇದ್ದಿರಬೇಕು! ಎಂದು ಬಲವಾಗಿ ಅನಿಸಲಾರಂಭಿಸಿತು. ಆಪಾದಿತನ ಸ್ಥೂಲತ್ವದ ವರ್ಣನೆ, ಇದಕ್ಕೆ ಪೂರಕವಾಗಿತ್ತು. ಅವನ ಸುಳುಹು ಕೊಡಮಾಡಿದವರಿಗೆ 50,000 ರೂಗಳ ಬಹುಮಾನ ಬೇರೆ ಘೋಷಿಸಲಾಗಿತ್ತು. ರಾಯರು ಹಿಂದಿರುಗಿ ಬರುತ್ತಿದ್ದಂತೆ, ತರಾಟೆಗೆ ತೆಗೆದುಕೊಂಡೆ. ಅವರೋ ತಾಳ್ಮೆಗೆಡದೇ ವರದಿಯನ್ನು ವಿವರವಾಗಿ ಓದಿದರು. ಮನಸ್ವೀ ನಕ್ಕರು. ನಂತರ ಗಂಭೀರವದನರಾಗಿ ಅದಕ್ಕೆ ಹೊಂದಿ ನಡೆದ ಘಟನೆಗಳನ್ನೆಲ್ಲ ವಿವರವಾಗಿ ಹೇಳಲಾರಂಭಿಸಿದರು.

ಮಕ್ಕಳ ದಿನಾಚರಣೆ, (ನವೆಂಬರ್ 14)ಕೇವಲ ಉಳ್ಳವರ ಮಕ್ಕಳಿಗೇ ಮೀಸಲಾಗಿರ ಬಾರದೆಂಬ ಹಟದಿಂದ, ಕಡುಬಡವರ ಮಕ್ಕಳ ಛಾಯಾಗ್ರಹಣ ಮಾಡುವದೆಂದು ಅವರು ನಿರ್ಧರಿಸಿದ್ದರು. ಮಲ್ಲೇಶ್ವರಂದಲ್ಲಿ ದೊಡ್ಡ ಕಾಂಪೌಂಡಿನ ಚಿಕ್ಕಮನೆಗಳು ಮಾಯವಾಗಿ ಎತ್ತರದ ಕಟ್ಟಡಗಳು ಎಲ್ಲೆಡೆಗೆ ತಲೆ ಎತ್ತುತ್ತಲೇ ಇವೆಯಷ್ಟೇ? ಅಲ್ಲೆಲ್ಲ ಕಟ್ಟಡ ಕಾರ್ಮಿಕರ ಕುಟುಂಬಗಳು ಬೀಡುಬಿಟ್ಟಿವೆ. ಹಿರಿಯರು ದಿನವಿಡೀ ದುಡಿಯುತ್ತಿದ್ದಾಗ ಬಿಡುವಿನಲ್ಲಿ ಸಾಂಸಾರಿಕ ತಾಪತ್ರಯಗಳನ್ನು ಬಗೆಹರಿಸಿಕೊಳ್ಳುವ, ವಾದ ವಿವಾದಗಳಲ್ಲಿ ತೊಡಗಿರುವಾಗ, ಅವರ ಬಹುಸಂಖ್ಯಾತ ಮಕ್ಕಳೆಲ್ಲ ಬಗೆಬಗೆಯ ಆಟಗಳಲ್ಲಿ ಮೈ-ಮರೆತಿರುತ್ತಾರೆ. ಅವರನ್ನು ಕ್ಯಾಮರಾದಲ್ಲಿ ಸೆರೆಹಿಡಿದಿಡುವ ಉದ್ದೇಶದಿಂದ ರಾಯರು 'ಚಾವಡಿ'

(ಅರ್ಧಮುಗಿದ ಮಹಾದ್ವಾರ)ಯಲ್ಲಿ ಬೀಡಿಸೇದುತ್ತ ಮಾತು-ಕತೆಯಲ್ಲಿ ಮಗ್ನನಾಗಿದ್ದ ತಂಡದ ಯಜಮಾನ ಫಕೀರಪ್ಪನಿಗೆ, "ಇಂದು ಎಲ್ಲ ಶಾಲೆಗಳಲ್ಲಿ ಮಕ್ಕಳ ದಿನಾಚರಣೆ ಮಾಡುತ್ತಾರೆ. ನೀವೆಲ್ಲ ದೂರದ ಗುಲ್ಬರ್ಗಾದಿಂದ ಇಲ್ಲಿ ಬಂದಿರುವದರಿಂದ ನಿಮ್ಮ ಮಕ್ಕಳಿಗೆ ಸ್ಕೂಲೂ ತಪ್ಪಿಹೋಗಿ, ಅವರೆಲ್ಲ ಈ ಸಂತೋಷದಿಂದ, ಆಟಪಾಠದಿಂದ ವಂಚಿತರಾಗಿದ್ದಾರೆ! ಅವರಿಗೆ ಮಿಠಾಯಿ ಹಂಚಿ, ಫೋಟೋ ಕ್ಲಿಕ್ಕಿಸಿ, ಸಂತೋಷ ಪಡಿಸಬೇಕೆಂದಿದ್ದೇನೆ." '.....' ಎಂದು ಹೇಳುತ್ತಿದ್ದಂತೆ, ಪಿತ್ಥ ನೆತ್ತಿಗೇರಿದ ಫಕೀರಪ್ಪ, "ಸೀಂ ಸೀಂ ಮಾತಾಡಿ ಮೋಸ ಮಾಡೋ ನಿಮ್ಮಂಥಾ ರಗಡ ಮಂದಿನ ನೋಡಿನ್ರಿ! ನಿಮ್ಮ ಫೋಟೋಗೀಟೊ ಶ್ರೀಮಂತರಿಗೇ ಇರ್ಲಿ. ನಮ್ಮಂಥಾ ಅರೇದವರ ಉಸಾಬರಿ ಬಿಡ್ರಿ! ರೊಕ್ಕಾ ಕೊಡ್ತೀನಿ ಅಂದ್ರೂ ನಮ್ಮಕ್ಳ ಫೋಟೋ ತಗ್ಯಾಕ ಬಿಡೋವ್ನ ಅಲ್ಲಾ! ಬಂದ್ಹಾಂಗ ತಿರುಗಿ ಹೋದ್ರ ನೆಟ್ಟಗ!" ಎಂದು ಗುಡುಗಿ ಹೆದರಿಕೆಯ ಜರ್ಬು ತೋರಿಸಿದ. ಅಲ್ಲದೇ ತೆರೆದ ಬಾಯಿಂದ, ಸುತ್ತಲೂ ಈ ದೃಶ್ಯ ನೋಡುತ್ತ ನಿಂತ ಮಕ್ಕಳಿಗೆ ಆ ಕೂಡಲೇ ತಂತಮ್ಮ ಗೂಡು ಸೇರುವಂತೆ ಆಜ್ಞಾಪಿಸಿದ. ಇಷ್ಟಾದರೂ ಧೃತಿಗೆಡದೇ, ಅವರ ಚಕ್ರವ್ಯೂಹ ಭೇದಿಸುವ ವಿಧಾನ ಕುರಿತು ಯೋಚಿಸುತ್ತಲೇ ರಾಯರು ಹಿಂದಿರುಗಿದ್ದರು. ಸುಲಭದಲ್ಲಿ ಸೋಲೊಪ್ಪಿಕೊಳ್ಳುವವರು ಅವರಲ್ಲ!

ಫಕೀರಪ್ಪನ ತಂಡದ ವಿವಿಧ ಚಟುವಟಿಕೆಗಳ ಮೇಲೆ ನಿಗಾ ಇಟ್ಟರು. ನಸುಕಿನಲ್ಲಿ ಎದ್ದ ದಿನಗೂಲಿಯ ಹೆಂಗಳೆಯರು, ಜೋಳದ ಭಕ್ರಿಗಳನ್ನು ಬಡಿದು, ಅವುಗಳೊಂದಿಗೆ ಹಸಿಖಾರ, ಬೆಳ್ಳುಳ್ಳಿ ಚಟ್ನಿ, ಗುಗ್ಗರಿ ಕಾಳು ವಗ್ಯೆರೆ ತಯಾರಿಸಿ, ನಾಶ್ತಾ ಮುಗಿಸಿ ಉಳಿದದ್ದನ್ನು ಬುತ್ತಿ ಕಟ್ಟುವರು. ರೊಟ್ಟಿಗಂಟು, ನೀರಿನೊಂದಿಗೆ ಗಂಡು-ಹೆಣ್ಣುಗಳು ಒಟ್ಟಿಗೆ ಕೆಲಸದ ಜಾಗಕ್ಕೆ ಧಾವಿಸುವರು. ಹಿಂದಕ್ಕೆ ಉಳಿದುಕೊಂಡ ಅಥವಾ ಬಿಟ್ಟುಹೋದ, ಚಿಕ್ಕಮಕ್ಕಳ ಮೇಲ್ವಿಚಾರಣೆಯನ್ನು ಅಲ್ಲಿದ್ದ ಓರ್ವ ಹಣ್ಣು ಮುದುಕಿಯೇ ನೋಡಿಕೊಳ್ಳಬೇಕು. ಒಂದು ದಿನ ಸುಸಮಯವೆಂದು ಸಾಧಿಸಿ ಅಲ್ಲಿ ಧಾವಿಸಿ, ಅಜ್ಜಿಯೊಡನೆ ಕುಶಲ ಸಮಾಚಾರ ವಿಚಾರಿಸಿ, 'ಅಜ್ಜವ್ವಾ, ಮಕ್ಕಳು, ಮೊಮ್ಮಕ್ಕಳು ಎಸು ಬೇ?' ಎಂದು ವಿಚಾರಿಸಿದರು. "ಎಂಟು ಮಕ್ಕಳು, ಹದಿನೆಂಟು ಮೊಮ್ಮಕ್ಕಳು ಆದಾರ್ರಿ" ಅಭಿಮಾನದಿಂದ ಬೊಚ್ಚ ಬಾಯಿಯ ನಗುನಕ್ಕಳು. "ನಿಂದೊಂದು ಫೋಟೋ ತೆಗೆಲೇನವ್ವಾ?" ಆಕ್ಷೇಪಣೆಯನ್ನು ನಿರೀಕ್ಷಿಸಿಯೇ ವಿಚಾರಿಸಿದಾಗ, "ಅಯ್ಯ ಶಿವನಽ! ಈ ಹಣ್ಣು ಮುದಕಿ ಫೋಟೋ ತೆಗ್ದು ಏನುಮಾಡ್ತೀರಿ? ಈ ಮಮ್ಮಕ್ಳು, ಅಲ್ಲಿ ಕುಂತಾವಲಾ ತಮ್ಮನ ಮಕ್ಳು? ಅವರೆಲ್ಲಾರ್ದು ಬೇಕಾದ್ಹಾಂಗ ತಗೀರಿ" ಎಂದು ತೆರೆದ ಮನದ ಪರವಾನಗಿ ಕೊಟ್ಟೇ ಬಿಟ್ಟಳು. ಸುರಿಯುತ್ತಿದ್ದ ಮೂಗಿನ, ಸಿಹಿಮೆತ್ತಿಕೊಂಡ ಮುಸುಡಿನ, ಕೆದರಿದ ಕೂದಲಿನ ಆದರೆ ಆರೋಗ್ಯವಂತ ಮಕ್ಕಳ ದೊಡ್ಡ ಬಳಗವೇ ಅಲ್ಲಿತ್ತು. ಹೋ! ಎಂದು ಬಂದು, ಕ್ಯಾಮರಾ ಹೊರ ತೆಗೆಯುತ್ತಿದ್ದಂತೆ ಮುತ್ತಿಕೊಂಡು ಬಿಟ್ಟವು! "ಹೀಗೆ ಗಲಾಟೆ ಮಾಡಿದರೆ ಯಾರ ಫೋಟೋನೂ ತೆಗೆಯೊದಿಲ್ಲ! ಎಲ್ಲರೂ ಸಾಲಾಗಿ ಚಪ್ಪಡಿರಾಶಿ ಮ್ಯಾಲೆ ಕುಂತಕೊಳ್ರಿ! ಒಬ್ಬೊಬ್ಬರನ್ನೆ ಕರೆದಾಗ ಬಂದು ಹೆಸರು, ವಯಸ್ಸು ಹೇಳಿದ ನಂತರ ನಾ ಹೇಳಿದ ಹಾಂಗ ನಿಂತಕೊಂಡ್ರನ, ಛಂದಛಂದ ಫೋಟೋ ತಗೀತಿನಿ!" ಅಂತಹೇಳಿ, ನಂತರ ಮೃದುವಾಗಿ ಮಾತನಾಡಿಸಿ ಪೆಪ್ಪರಮಿಂಟ್ ಕೊಟ್ಟು ಮಕ್ಕಳ ವಿಶ್ವಾಸವನ್ನು ರಾಯರು ಗಳಿಸಿದರು. ಈಗ ಮಕ್ಕಳು ರಾಯರ ಸಲಹೆಗಳನ್ನು ಶಿರಸಾ ಪಾಲಿಸಲಾರಂಭಿಸಿದರು.

ಶರಣಯ್ಯನ ಸರದಿ ಬಂದಾಗ, ಒಂದು ಗಾಲಿ ಇಲ್ಲದ ತನ್ನ ತ್ರಿಚಕ್ರ ಸ್ಯಾಕಲ್ ಓಡಿಸಿ ಮೆಚ್ಚಿಗೆ ಪಡೆದ. ಹುಲಿಯಮ್ಮ "ಹಚ್ಚನ ಚೇಳಾ ಹರಿದಾಡಿ ಬಂದಾ ಕಚ್ಚಿತವ್ವ ನನ್ನ

ಕಿರುಬೆರಳ!" ಹಾಡನ್ನು ಹಾವಭಾವದೊಂದಿಗೆ ಹಾಡಿದಳು. ಲಿಂಗ್ಯಾ, ಬಿಸಾಕಿದ ಸ್ಕೂಟರ್ ಟಾಯರ್ ಓಡಿಸುವ ವಿಧಾನ ಪ್ರದರ್ಶಿಸಿದ. ತಾಯಮ್ಮ ದೊಡ್ಡಾಟ, ಬಯಲಾಟದ ಶೂರ್ಪನಖಿಯ ಅಭಿನಯ ಮಾಡಿ ತೋರಿಸಿದಳು. ಬಸ್ಯಾನು, ಕಸದ ತೊಟ್ಟಿಯಲ್ಲಿದ್ದ ಥರ್ಮೋಕೋಲ್‌ನ ರಟ್ಟಿನ ಮೇಲೆ ಕೋಲಿನಿಂದ ಬಡಿದು ವಾದ್ಯವನ್ನು ನುಡಿಸಿದ. ಈರವ್ವ, ಶಿವಮ್ಮ ಕೂಡಿ ಪುಗಡಿ ಕುಣಿತ, ಪ್ರದರ್ಶಿಸಿದರು. ಸಣ್‌ಬಸಪ್ಪ, ಲಗಾಟೆಯ ಪ್ರಕಾರಗಳನ್ನು ತೋರಿಸಿದ. ಇವರೆಲ್ಲರಿಗಿಂತ ಕೊಂಚವೇ ದೊಡ್ಡವಳಾದ ಶಾಂತವ್ವ ಉರುವಲಿಗಾಗಿ ಕಸ-ಕಡ್ಡಿ, ತರಗೆಲೆಗಳನ್ನು ಹೊತ್ತು ಬರುವ ನೋಟವೂ ಸೇರಿದಂತೆ, ರಾಯರು ಎಲ್ಲ ಎಳೆಯರ ಫೋಟೊ ಕ್ಲಿಕ್ಕಿಸಿದರು. ಪಾತ್ರೆ ಬೆಳಗುತ್ತಿದ್ದ ಸೋಮಿ, ತಮ್ಮನನ್ನು ನೋಡಿಕೊಳ್ಳುತ್ತಿದ್ದ ಹನುಮಿಯೂ ಕ್ಯಾಮರಾದಲ್ಲಿ ಬಂಧಿತರಾದರು.

ತಮ್ಮ ಜೀವನದಲ್ಲಿಯೇ ಮೊಟ್ಟ ಮೊದಲಬಾರಿ ಫೋಟೊ ತೆಗೆಸಿಕೊಂಡ ಮಕ್ಕಳ ಉತ್ಸಾಹ ಹೇಳಿತೀರದು! ಫ್ಲ್ಯಾಶ್‌ನ ಬೆಳಕು ಇತರರ ಮೇಲೆ ಬಿದ್ದಾಗಲೂ ತಮ್ಮದೇ ಫೋಟೊ ಹಿಡಿಯಲಾಗಿದೆ ಎಂದು ಆ ಮುಗ್ಧರು ನಂಬಿದರು. "ಶಾಂತವ್ವಳದು ನಾಲ್ಕು ತಗದೀರಿ! ನಂದು ಬರೇ ಮೂರು!" ಒಬ್ಬಾಕೆ ದೂರಿಕೊಂಡರೆ, ಎಲ್ಲೋ ಹೋಗಿದ್ದ ಮಲ್ಲಿ, ನಂದು ತಗದಾ ಇಲ್ಲ ಎಂದು ಅಳುಮುಖ ಮಾಡಿದಳು. ಅವರ ಸಮಾಧಾನಕ್ಕೆ ಫಿಲ್ಮ ಮುಗಿದರೂ ಫ್ಲ್ಯಾಶ್ ಹಾಕಿ ಫೋಟೊ 'ಹಿಡಿದರು'

ಈಗ ಹೊಸ ಅಧ್ಯಾಯ ಪ್ರಾರಂಭವಾಯಿತು. ಬರಹೋಗುವಾಗ ಮಕ್ಕಳು ಅಂಕಲ್! ಎಂದು ಕೂಗುತ್ತ ಬೆಂಬತ್ತುವರು. ಹೊಸ ಆಟಿಕೆ ತರುವರು, ಒಳ್ಳೆ ಬಟ್ಟೆ ಹಾಕಿಕೊಂಡು ಬರುವರು. ಫೋಟೊ ಕೊಡ್ತೀರಾ? ಎಂದಾಗ ಹೌದೆಂದ ತಪ್ಪಿಗೆ ಯಾವಾಗ ತರುತ್ತೀರಿ? ಎಂದು ಪೀಡಿಸುವರು. 'ಮೂರು ವಾರ ಬೇಕು!' ಎಂದು ಹೇಳಿ ಹೊರಟಾಗ, ಅಂಕಲ್ ಟಾಟಾ! ಬೈ ಬೈ! ಎಂದು ಕಣ್ಮರೆಯಾಗುವವರೆಗೂ ಅರಚುವರು. ಅಜ್ಜಿಯ ಕೆಲಸ ಈಗ ಹಗುರವಾಯಿತು! ಅವಳಿಗೊಬ್ಬ ಸಹಾಯಕ ದೊರೆತಿದ್ದ!

ಮಕ್ಕಳು ಎಲ್ಲೇ ಇರಲಿ, ಏನೇ ಮಾಡುತ್ತಿರಲಿ, ರಾಯರ ಬರುವಿಕೆಯ ಸುಳಿವು ಕಂಡೊಡನೆ ಮಿಂಚಿನಂತೆ ಒಟ್ಟಾಗುವರು. 'ಅಂಕಲ್! ಬರ್ರಿ. ಫೋಟೊ ತಗೀರಿ! ಕ್ಯಾಮರಾ ತರ್‍ಲಿಲ್ಲೇನು? ಫೋಟೊ ಬಂದಿಲ್ಲೇನು? ಫೋಟೊ! ಫೋಟೊ' ಎಂದು ಕಿರುಚಿಕೊಳ್ಳುವವು. ತಾಯ ಮೊಲೆ ಚೀಪುತ್ತಿದ್ದ ಮಗುವೂ, ಆ ಕೆಲಸ ನಿಲ್ಲಿಸಿ ಅಂಕಲ್ ಫೋಟೊ! ಎಂದು ಕೂಗಿದಾಗ ಬೆಪ್ಪಾದರು. ದಿನಾಲು ಕೂಗುತ್ತಿದ್ದವರಿಗೆ ಕೈಯನ್ನೇ ಕ್ಯಾಮರಾ ಮಾಡಿ, ಬಾಯಿಂದಲೇ ಕ್ಲಿಕ್! ಎಂದು ಸದ್ದು ಮಾಡಿದಾಗ ಬಿದ್ದುಬಿದ್ದು ನಗುವರು. ದಾರಿಹೋಕರು ಈ ಕಾರ್ಮಿಕ ಮಕ್ಕಳಿಂದ ಸುತ್ತುವರಿದ ರಾಯರನ್ನು ಹುಬ್ಬೇರಿಸಿ ನೋಡುವರು. ಇದೆಲ್ಲಿಯ ಸಂಬಂಧ? ಎಂಬ ಸೋಜಿಗ ಅವರಿಗೆ. ಇಂಗ್ಲಿಷ್ ಸ್ಕೂಲಿಗೆ ಹೋಗುವ ತಮ್ಮ ಮಕ್ಕಳನ್ನು ಕ್ಲಿಕ್ಕಿಸಬಾರದೇ? ಎಂದು ಹಲುಬಿದ ತಾಯಂದಿರೂ ಕಂಡರು. ಬೆನ್ನು ಬಿಡದೇ ರಸ್ತೆಯ ವಾಹನ ಸಂಚಾರವನ್ನೂ ಲೆಕ್ಕಿಸದೇ ಕಂಡೊಡನೆ ಓಡೋಡಿ ಬಂದು ಹಿಂಬಾಲಿಸುವ ಪುಟಾಣಿಗಳನ್ನು ಕಂಡಾಗ, ಬೊಮ್ಮನ ಹಳ್ಳಿಯ ಕಿಂದರಿಜೋಗಿಯನ್ನು ನೆನಪಿಗೆ ತರುತ್ತಿತ್ತು. ರಾಯರೀಗ ಕ್ಯಾಮರಾಜೋಗಿ ಆದರು!

"ಅದೆಲ್ಲ ಸರಿ! ಆದರೆ ಮಕ್ಕಳು ಕಾಣೆ ಆಗುವುದಕ್ಕೂ ನಿಮ್ಮ ಕ್ಯಾಮರಾಗೂ ಎಲ್ಲಿಯ ಸಂಬಂಧ?" ಎಂದು ಪ್ರಶ್ನಿಸಿದಾಗ, 'ಆ ಮಕ್ಕಳಲ್ಲೆ ಸ್ವಲ್ಪ ದೊಡ್ಡವು, ಪೋಲಿಗಳ ಸಹವಾಸಕ್ಕೆ ಬಿದ್ದು ತಮ್ಮ ತಂಡ ಬಿಟ್ಟು ಓಡಿ ಹೋಗುವದು ಉಂಟು! ಹಾಗೇನಾದರೂ

ಆಗಿದ್ದರೆ, ಆ ಫಕೀರಪ್ಪ. ಇದೆಲ್ಲ ನನ್ನದೇ ಕಿತಾಪತಿ! ಎಂದು ಭಾವಿಸಿ ದೂರು ಕೊಟ್ಟಿರಬಹುದಾಗಿದೆ. ಇದನ್ನು ಪೋಲಿಸರು ನಂಬದಿದ್ದರೂ ಸೋತ ರಾಜಕಾರಣಿಗಳು, ಚಲಾವಣೆಯಲ್ಲಿ ಇರುವದಕ್ಕಾಗಿ ತಮ್ಮ ವೋಟ್‌ಬ್ಯಾಂಕ್‌ಗಳ ಅಮಾಯಕರನ್ನು, ಅವರ ಮುಖಂಡರನ್ನು ಎತ್ತಿ ಕಟ್ಟುವುದು ಇದ್ದೇ ಇದೆ! ಅವರ ಒತ್ತಾಯದ ಮೇಲೆ ಬಹುಮಾನ ಸಾರಿರಬಹುದಾದ ಸಂಭವವೂ ಇದೆ. ಈಗ ನಾನೇ ಪೋಲಿಸ್ ಠಾಣೆಗೆ ಫೋನ್‌ಮಾಡಿ, ನಿಜವಿದ್ದದನ್ನು ವಿವರಿಸುತ್ತೇನೆ' ಎಂದು ಹೇಳುವಷ್ಟರಲ್ಲಿ, ಕರೆಗಂಟೆ ಜೋರಾಗಿ ಒಂದೇ ಸಮನೆ ಕಿರುಚಿಕೊಂಡಿತು. 'ಕನಕನ ಕಿಂಡಿ'ಯಿಂದ ಹಣಿಕಿ ನೋಡಿದಾಗ, ದೊಡ್ಡ ಪೋಲಿಸ್‌ಪಡೆ, ಅವರ ಹಿಂದೆ ಕೆಲಸಗಾರರ ತಂಡದ ಫಕೀರಪ್ಪ ಹಾಗೂ ಮಕ್ಕಳತಂಡ ನಿಂತಿತ್ತು! ಉದ್ವಿಗ್ನತೆಯ ವಾತಾವರಣ ತಪ್ಪಿಸಲು ಅವರನ್ನು ಒಳಗೆ ಬರಮಾಡಿಕೊಂಡದ್ದಾಯ್ತು. ಮಕ್ಕಳು ಹಿರಿಯರ ಅಡ್ಡಿ ಲೆಕ್ಕಿಸದೆ 'ಅಂಕಲ್! ಅಂಕಲ್ ಫೋಟೋ ಅಂಕಲ್!' ಎಂದು ಕಿರುಚಿಕೊಂಡವು. ಆಪಾದಿತನ ಗುರುತು ಹಿಡಿಯಲು ಅವರನ್ನು ಕರೆತಂದದ್ದು ಸಾರ್ಥಕವಾಯಿತೆಂದು ಫಕೀರಪ್ಪ ಹಿಗ್ಗಿದ. ಮನೆಯೊಳಗೆಲ್ಲ ಓಡಾಡಿದವು. ಕತ್ತಲೆಕೋಣೆ ಪ್ರವೇಶಿಸಿದ ಪೋಲಿಸರಿಗೆ, ಮಕ್ಕಳ ಫೋಟೋಗಳ ರಾಶಿಯೇ ಸಿಕ್ಕಿತು! ಅವನ್ನು ಕ್ರಮವಾಗಿ ಮಕ್ಕಳಿಗೆ ಹಂಚಲು ರಾಯರು ತೆಗೆದಿರಿಸಿದ್ದರು. ಮಕ್ಕಳೆಲ್ಲ ಅವನ್ನು ನೋಡಿ ಕುಣಿದು ಕುಪ್ಪಳಿಸಿ ಕಾಮೆಂಟ್ಸ್ ಪ್ರಾರಂಭಿಸಿದವು! ಹಿರಿಯರೆಲ್ಲ ತಾವು ಹೇಳಿದ್ದೆ ನಿಜವಾಯ್ತು! ಎಂದು ರಾಯರ ಮೇಲೆ ಆಕ್ರಮಣ ನಡೆಸಲು ತಯಾರಾದರು. ಏಕೆಂದರೆ ಕಾಣೆಯಾದವರ ಚಿತ್ರಗಳು ಸಿಕ್ಕವು. ಪೋಲಿಸ್ ಸಿಬ್ಬಂದಿ, ಮಧ್ಯಪ್ರವೇಶಿಸಿ, ನೆರವಿಗೆ ಬಂದು, "ನಿಮ್ಮ ಮಕ್ಕಳು ಎಲ್ಲಿದ್ದರೂ ಹಿಂದೆ ಕರೆದು ತರುತ್ತೇವೆ. ನೀವು ಕೂಡಲೇ ಹಿಂದಿರುಗಿ ಹೋಗ್ರಿ!" ಎಂದು ಆಜ್ಞಾಪಿಸಿದರು. ಮಕ್ಕಳು ಅಂಕಲ್‌ನನ್ನೂ, ಫೋಟೋಗಳನ್ನೂ ಬಿಟ್ಟುಹೋಗಲೊಪ್ಪದೇ ಹಿರಿಯರಿಂದ ಗುದ್ದಿಸಿಕೊಂಡು, ಅಳುತ್ತ ಹಿಂದಿರುಗಿದವು.

ಕಾಣೆಯಾದ ಮಕ್ಕಳ ಭಾವಚಿತ್ರಗಳನ್ನಷ್ಟೆ ಒಯ್ದ ಪೋಲಿಸರು, ಮರುದಿನ ಫೋನಿಸಿ, "ಮಕ್ಕಳನ್ನು ಪತ್ತೆ ಹಚ್ಚುವಲ್ಲಿ ಯಶಸ್ವಿ ಆಗಿದ್ದೇವೆ! ನೀವು ತೆಗೆದ ಫೋಟೊ ತುಂಬ ಸಹಾಯವಾದವು ಸಾರ್! ಕಾಣೆಯಾದವರು ರಾಣೆಬೆನ್ನೂರ ಹೋಟೇಲೊಂದರಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದರು! ಅವರು ಬೀಡಿ, ಡ್ರಗ್ಸ್ ಚಟ ರೂಢಿಸಿಕೊಂಡು, ಸಣ್ಣಪುಟ್ಟ ಕಳ್ಳತನ ಮಾಡಿ, ತಂಡದ ಹಿರಿಯರಿಂದ ಥಳಿಸಿಕೊಂಡಿದ್ದರು. ಅಂತೆಯೇ ಓಡಿಹೋಗಿ ತಿಕೀಟಿಲ್ಲದೇ ರೈಲ್ವೆಯಲ್ಲಿ ಪ್ರಮಾಣಮಾಡಿ, ಆ ಊರು ಸೇರಿ, ಕ್ಲೀನರ್ ಅಂತ ಕೆಲಸಕ್ಕಿದ್ದರು. ಈಗ ಹಿಡಿದು ತಂದು ಅವರ ಗುಂಪಿಗೇ ಸೇರ್ಸಿದಿವಿ. ಈ ಸಾಹಸದ ಯಶಸ್ಸು ಪೂರ್ತಿ ನಮಗೇ...ಅಲ್ಲಲ್ಲ! ತಮಗೇ ಸೇರಬೇಕು ಸಾರ್! ಈಗ ಬಹುಮಾನದ ಹಣದ ಕುರಿತು ನಮ್ಮದೊಂದು ಸೂಚನೆ..... ಆ ಹಣ, ತಂಡದ ಮುಖ್ಯಸ್ಥನ ಹೆಸರಿಗೆ ಮಂಜೂರಿ ಮಾಡಿಸಿ, ಅದನ್ನು ನಾವು, ನೀವು ಪಾಲುಮಾಡಿಕೊಂಡು ಅಡ್ಜಸ್ಟ್ ಮಾಡಿಕೊಳ್ಳುವದು! ಇದು ನಡೆದು ಬಂದ ಪದ್ಧತಿ.....ಇದಕ್ಕೆ ತಮ್ಮ ಸಂಪೂರ್ಣ ಸಮ್ಮತಿ ಇದೆ, ಎಂದು ನಂಬೋಣವೇ?" ಈ ಮಾತು ಕೇಳುತ್ತಿದ್ದ ರಾಯರು ಬೆಚ್ಚಿಬಿದ್ದರು. "ನನಗೆ ಫಕೀರಪ್ಪ, ಪೋಲಿಸರು, ಪೋಲಿಸರು ನಡೆದು ಬಂದ ಪದ್ಧತಿ, ಎಲ್ಲವೂ ಕಷ್ಟಕ್ಕಿಟ್ಟುಕೊಂಡಿದೆ! ನನಗೆ ಆ ಮೊತ್ತದಲ್ಲಿ ಬಿಡಿಕಾಸೂ ಬೇಕಾಗಿಲ್ಲ! ನೀವುಗಳೇ ಸೇರಿಕೊಂಡು ಹೇಗೆಬೇಕೋ ಅಡ್ಜಸ್ಟ್ ಮಾಡಿಕೊಳ್ಳಿ" ಎಂದು ಫೋನನ್ನು ಕುಕ್ಕಿ ನೆಮ್ಮದಿಯ ನಿಟ್ಟುಸಿರುಬಿಟ್ಟರು. ■

# ಪರೋಪಕಾರಿ

ಕ್ವಚಿತ್ತಾಗಿ ರಾಗವೆಳೆಯುವ ಕರೆಗಂಟೆ, ಜೋರಾಗಿ ಕಿರುಚಿಕೊಂಡಾಗ, ಸಿಟ್ಟುಬಂದಿತ್ತು. ವರದಕ್ಷಿಣೆಯ ಕಿರುಕುಳದಿಂದ ಮೂವರು ಯುವಪತ್ನಿಯರು ಆತ್ಮಹತ್ಯೆ ಮಾಡಿಕೊಂಡ ಸಮಾಚಾರ ಓದಿ ಮನಸ್ಸು ವ್ಯಗ್ರಗೊಂಡಿತ್ತು. 'ಯಾರು ಬೇಕು?' ಎಂದು ಕಹಿಯಾಗಿಯೇ ಕೇಳಿದೆ, ಯಾರೋ ತಪ್ಪು ನಂಬರಿನ ಮನೆಯ ಗುಂಡಿ ಒತ್ತಿರಬಹುದು, ಎಂದು ಊಹಿಸಿ. ಯಾರೋ ಸುಶಿಕ್ಷಿತ ವ್ಯಕ್ತಿ ನಮಸ್ಕರಿಸಿ, ಡಾ। ಕೃಷ್ಣಾನಂದ ಕಾಮತರ ಮನೆ ಇದೇನಾ? ಎಂದು ಸಭ್ಯತೆಯಿಂದ ವಿಚಾರಿಸಿತು. ಬಾಗಿಲು ಪೂರ್ಣತೆಗೆದು ಧ್ವನಿತಗ್ಗಿಸಿ, "ನೀವು ಯಾರು?" ಎಂದು ಕೇಳಿದೆ. "ನಾನು ಪ್ರೊ। ಸುಬ್ರಮ್ಹಣ್ಯ. ಕುಟಜಾದ್ರಿ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ. ನನ್ನ ಸಂಶೋಧನಾ ಮಾರ್ಗದರ್ಶಿ, ಪ್ರೊ। ಇಷ್ಟಸಿದ್ಧಿಯವರು, 'ಕೃಷ್ಣಾನಂದ ಕಾಮತರು ಬಹುಮುಖ ಪ್ರತಿಭೆಯ ವ್ಯಕ್ತಿ, ಆದರೆ ಯಾರೂ ಅವರನ್ನು ನೋಡಿಲ್ಲ! ಅರಿತಿಲ್ಲ! ಅವರನ್ನು ಅಭ್ಯಸಿಸಿ ಮಹಾಪ್ರಬಂಧ ಬರೆದರೆ ನಿಮಗೆ ಪಿಎಚ್.ಡಿ. ಡಿಗ್ರಿ ಜೊತೆಗೆ ಸಕಲರಿಂದ ಮಾನ್ಯತೆ ನಿಶ್ಚಿತವಾಗಿ ಸಿಗುತ್ತದೆ' ಎಂದು ಅವರೇ ಹೆಸರು, ಕಾಯಂ ವಿಳಾಸ ಹುಡುಕಿಕೊಟ್ಟು, ಪರಿಚಯ ಪತ್ರವನ್ನೂ ಕಳಿಸಿದ್ದಾರೆ!" ಎಂದು ಅಲ್ಪಪರಿಚಯ ನೀಡಿದವರನ್ನು ಬರಮಾಡಿಕೊಂಡು, ವಿರಮಿಸಲು ಹೇಳಿ ಕಾಫಿ-ಕುರುಕಲು ತಿಂಡಿ ತಂದಿಟ್ಟೆ. ಗೆಲುವಾದರು.

ರಾಯರನ್ನು ತಾವಾಗಿ ಹುಡುಕಿಕೊಂಡು ಬಂದು ಶೋಧ ಸಂಶೋಧನೆಗೆ ಒಳಪಡಿಸ ಬಯಸುವವರ ಅತ್ಯಪೂರ್ವರ, ಮುಂದೆ ಸುಮ್ಮನಿರಲಿಕ್ಕುಂಟೆ? ಅವರ ಮೂಲ ಪರಿಚಯ ಕೊಡಲು ಪ್ರಾರಂಭಿಸಿದೆ. "ನಾನು ಡಾ। ಕಾಮತರ ಧರ್ಮಪತ್ನಿ. ನನ್ನವರು ತೀರ ವಿಕ್ಷಿಪ್ತವ್ಯಕ್ತಿ! ಅವರನ್ನು ಕಾಣಬಯಸುವವರನ್ನು ನಾನಿನ್ನೂ ಕಂಡಿಲ್ಲ. ಅವರು 'ಪ್ರಸಿದ್ಧಿ ಪರಾಙ್ಮುಖಿ' ಎಂಬ ಬಿರುದು ಪಡೆದು ಮೂರು ದಶಕಗಳೇ ಕಳೆದಿವೆ! ನೀವು ನೋಡಬೇಕಾದ ವ್ಯಕ್ತಿ ಸುಪ್ರಸಿದ್ಧ ಡಾ। ಸೂರ್ಯನಾಥ ಕಾಮತರು ಅಲ್ಲವಷ್ಟೇ?" ಎಂದು ಸಂದೇಹ ಸೂಚಕವಾಗಿ ಕೇಳಿದಾಗ, ಬಂದವರು ಗಾಬರಿಯಾಗಿ, ಬ್ರೀಫ್‌ಕೇಸ್‌ನಿಂದ ಕಾಗದ-ಪತ್ರಗಳನ್ನು ಹೊರಗೆಳೆದು, ಇನ್ನೊಮ್ಮೆ ಸರಿಯಾಗಿ ನೋಡಿ, "ಹೆಸರು-ವಿಳಾಸ ಸರಿಯಾಗಿಯೇ ಇವೆ, ಮ್ಯಾಡಂ! ಅಲ್ಲದೇ ದಾರಿಹೋಕ ಪುಣ್ಯಾತ್ಮರು ಒಬ್ಬರು, ಜೊತೆಗೆ ಬಂದು ನಿಮ್ಮ ಫ್ಲ್ಯಾಟನ್ನು ತೋರಿಸುವ ಔದಾರ್ಯ ತೋರಿದ್ದಾರೆ! ಬೆಂಗಳೂರಿನ ಜನ ಸರಿಯಾಗಿ ಮಾರ್ಗದರ್ಶನ ಮಾಡುವದಿಲ್ಲ. ಗೊತ್ತಿಲ್ಲವೆಂದು ಪ್ರಾಮಾಣಿಕವಾಗಿರದೇ ತಪ್ಪಾಗಿ ಸೂಚನೆಯಿತ್ತು, ಮನೆ-ಮನೆ, ಬೀದಿ-ಬೀದಿ ಅಲೆಯುವಂತೆ ಮಾಡುತ್ತಾರೆ! ಎಂದು ಸಹೋದ್ಯೋಗಿ ಒಬ್ಬರು ಎಚ್ಚರಿಸಿಯೇ ಇದ್ದರು. ನಿಮ್ಮ ಮಲ್ಲೇಶ್ವರದವರು ಇದಕ್ಕೆ ಅಪವಾದ ಇದ್ದಿರಬೇಕು! ಅಲ್ಲದೇ ದಾರಿಯುದ್ದಕ್ಕೂ ಆ ಅಪರಿಚಿತರು, ನಾನು ಕೇಳುತ್ತಿದ್ದ ಪ್ರಶ್ನೆಗಳಿಗೆಲ್ಲ ಬೇಸರಿಸಿದೇ ವಿನೋದವಾಗಿ, ಮಾರ್ಮಿಕವಾಗಿ ಉತ್ತರಿಸುತ್ತ ಬಂದರು. ಕೃತಜ್ಞತೆ ಸೂಚಿಸಿ, ಪಕ್ಕದ ಹೊಟೇಲಿನಲ್ಲಿ ಕಾಫಿ ಕುಡಿಯೋಣವೆಂದರೆ ಒಪ್ಪದೇ ಹಾಗೇ

ಹೊರಟುಬಿಟ್ಟರು......ಅವರು ಹಾಗೆ ನಡೆದುಕೊಂಡದ್ದರಿಂದ ನಿಮ್ಮ ಕೈಯ ಸೊಗಸಾದ ಕಾಫಿ ಕುಡಿಯುವ ಭಾಗ್ಯ ನನ್ನದಾಯ್ತು!" ಬರಿದಾದ ಲೋಟ ಕೆಳಗಿಟ್ಟರು.

"ನೀವು, ಧರ್ಮಪತ್ನಿಯಾಗಿ ಅವರನ್ನು ಹೇಗೆ ಮಾಪನ ಮಾಡುತ್ತೀರಿ?" ಆಗಂತುಕರು ನೋಟ್‌ಬುಕ್, ಪೆನ್ ಹಿಡಿದು ಕೆಲಸ ಆರಂಭಿಸಿಯೇ ಬಿಟ್ಟರು. "ಮಾಪನವೇ? ನಮ್ಮ ವಿವಾಹದ ಮೂವತ್ತೈದು ವರ್ಷಗಳು ಕಳೆದರೂ, ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆಗಿಲ್ಲ! ಮಾಪನ ಎಲ್ಲಿಂದ ಬಂತು? ಅವರು ಮಿತಭಾಷಿ. ಆದರೆ ಚುಟುಕಾಗಿಯೇ ಗಂಭೀರ ವಿಚಾರ ಹೇಳುತ್ತಾರೆ. ವಿವಾಹದ ಅನುಭವಗಳ ಬಗ್ಗೆ ಸಹೋದ್ಯೋಗಿಗಳು ಹೊಸದರಲ್ಲಿ ವಿಚಾರಿಸಿದಾಗ, ವಿವಾಹಕ್ಕೆ ಮೊದಲು ಪ್ರಯೋಗಾಲಯ ಹೊಕ್ಕರೆ ಮನೆಗೆ ಹೋಗಲು ಮರೆಯುತ್ತಿದ್ದೆ. ಈಗ ಪತ್ನಿಯನ್ನು ಬಿಟ್ಟು ಕಾಲೇಜಿಗೆ ಹೋಗಲು ಮರೆಯುತ್ತಿದ್ದೇನೆ!" ಎಂದು ಗಂಭೀರವಾಗಿಯೇ ಹೇಳಿದರು. "ಆದರೆ ಒಳ್ಳೆಯ ಶಿಕ್ಷಕರು ಸಂಶೋಧಕರು ಎಂದು ಗುರುತಿಸಲ್ಪಟ್ಟದ್ದರಿಂದ ಯಾರೂ ಅವರ ಮಾತು ನಂಬಲಿಲ್ಲ" ನಾನೆಂದೆ.

ಆಗಂತುಕರು, ತಾನಿನ್ನೂ ಮಲ್ಲೇಶ್ವರದ ಈ ಮನೆಯ ಶೋಧದಲ್ಲಿ ಯಶಸ್ವಿಯಾದ ಗುಂಗಿನಲ್ಲೇ ಇದ್ದರು. "ಒಳ್ಳೆ ಜನ ಇದ್ದುದರಿಂದಲೇ ಈ ಜಗತ್ತು ನಡೆದಿದೆ, ನೋಡಿ! ಬೆಂಗಳೂರಿಗೆ ಹೊಸಬ. ಯಾರೋ ಮಲ್ಲೇಶ್ವರಕ್ಕೆ ಹೋಗುವ ಬಸ್ ಹತ್ತಿಸಿದರು. ಆದರೆ ನನಗೆ ಬೇಕಾದ ವಿಳಾಸ ಓದಿನೋಡಿ, ವಿವರಿಸಲು ಯಾರಿಗೂ ಬಿಡುವೇ ಇಲ್ಲ. ಕೇಳಿದವರು, ಕೈಚಲ್ಲಿ ಹಾದಿ ಹಿಡಿಯುತ್ತಿದ್ದರು. ಕೊನೆಗೊಬ್ಬ ಹಿರಿಯರು ಭುಜಗಳಿಗೆ, ಎರಡೂ ಕೈಗಳಿಗೆ ಚೀಲಗಳನ್ನು ತಗಲಿಸಿ ಇರುವೆ ವೇಗದಿಂದ ಎದುರಾದರು. ಅನುಮಾನಿಸುತ್ತಲೇ ವಿಚಾರಿಸಿದೆ. "ಬನ್ನಿ, ಯೋಚಿಸಬೇಡಿ. ಇಲ್ಲಿಯವರಿಗೆ ಯಾರಿಗಾದರೂ ಇವರ ಪರಿಚಯ ಇದೆಯೇ? ಎಂದು ಕೇಳಿ ನೋಡೋಣ" ಎಂದು ನನ್ನೊಂದಿಗೇ ಬಂದರು. ಒಂದೆರಡು ಚೀಲ ನನ್ನ ಕೈಗೆ ಕೊಡಿ ಎಂದರೂ ಕೇಳದೇ, ಇವೆಲ್ಲವನ್ನೂ ಹೊತ್ತಾಗಲೇ ವಾಕ್‌ಮಾಡಿದ ಸುಖ ನನ್ನದಾಗುತ್ತದೆ! ಎಂದು ನಕ್ಕರು. ಗಿರಾಕಿಗಳಿಂದ ತುಂಬಿದ ಪಕ್ಕದ ಹೊಟೇಲಿನಲ್ಲಿ ವಿಚಾರಿಸಿದರು. "ಇಂಥ ವ್ಯಕ್ತಿಯ ಅಸ್ತಿತ್ವ ತಮಗೆ ಗೊತ್ತಿಲ್ಲವೆಂದು ಮಾಲಕರು ಹೇಳಿ ಹಣ ಎಣಿಸಲಾರಂಭಿಸಿದರು. ಅಲ್ಲಿಯ ಚಿಕ್ಕ ಅಂಗಡಿಯವರು, ಕಾಫಿಕುಡಿಯುತ್ತಿದ್ದವರು, ವಡಾ ನುಂಗುತ್ತಿದ್ದವರೂ ಕೈಚೆಲ್ಲಿದರು. ಧೋಬಿಗಳಿಗೆ ಗೊತ್ತಿರುತ್ತದೆ! ಎಂದು ಅವನಂಗಡಿಯಲ್ಲಿ ವಿಚಾರಿಸಿದಾಗ ಇಂಥವರೇ ಬಟ್ಟೆ ತಂದುಕೊಟ್ಟಿಲ್ಲವೆಂದರು. ನರ್ಸಿಂಗ್ ಹೋಂನಲ್ಲಿ ವಿಚಾರಿಸಿದಾಗ ಈ ಏರಿಯಾದ ಡಾಕ್ಟರರೆಲ್ಲರ ಪರಿಚಯವಿದೆ. ಈತನೆಂಥ ಡಾಕ್ಟರ್! ಎಂದು ಮುಖ ಕಿವುಚಿದರು. ಬ್ಯಾಂಕ್‌ನಲ್ಲಿ ವಿಚಾರಿಸಿದರು, ಪೋಲಿಸರಿಗೆ ವಿಚಾರಿಸೋಣವೆಂದರು. ನಾನೇ ಬೇಡವೆಂದೆ. ಕೊನೆಗೆ ಆ ಯಜಮಾನರು, "ಈ ಫ್ಲ್ಯಾಟ್ ಇರುವ ಕಟ್ಟಡ ತೋರಿಸುತ್ತೇನೆ. ಬಾಗಿಲಲ್ಲಿ ಕಾವಲುಗಾರ ಇದ್ದೇ ಇರುತ್ತಾನೆ. ಅವನು ಮನೆಯನ್ನು ತೋರಿಸಿಕೊಡುತ್ತಾನೆ" ಎಂದು ಇಲ್ಲಿಯವರೆಗೆ ಬಂದು, ಮುಟ್ಟಿಸಿ ತಮ್ಮ ಕೆಲಸಕ್ಕೆ ಹೊರಟು ಹೋದರು. ನಿಮ್ಮ ದರವಾನನು ಕಾಮತರೆಂದೊಡನೆ "ಶಿವಮೊಗ್ಗೆಯ 'ಕೃಷ್ಣಾ ಮೋಟರ್ಸ್' ಕಾಮತರ ಮನೆಗೆ ಕರೆದೊಯ್ಯಬೇಕೇ? ಪುಣ್ಯಕ್ಕೆ ಆ ಮನೆಯವರು, ಕೃಷ್ಣಾನಂದ ಕಾಮತರ ಪರಿಚಯ ಇದೆಯೆಂದು ಈ ಮನೆ ತೋರಿಸಿದರು" ಆಗಂತುಕರೆಂದರು. "ಕಾಮತರ ಮೌಲ್ಯಮಾಪನಕ್ಕೆ ಸಹಾಯವಾಗುವ ಒಂದೆರಡು ವಿಚಾರ ಹೇಳುತ್ತೀರಾ?"

"ಮೌಲ್ಯಮಾಪನವೇ? ಸರಿ! ಸರಿ. ಹಣವನ್ನು ಎಣಿಸುವದರಲ್ಲಿ ತುಂಬಾ ಜಾಗ್ರತೆವಹಿಸುತ್ತಾರೆ! ಹಿರಿಕಿರಿದೆಂದು ಭೇದಮಾಡದೇ ಒಂದು, ಎರಡು, ಐದು ರೂಪಾಯಿ ಮೌಲ್ಯದ ನೋಟುಗಳ ಘೋರ ಅಭಾವ ಕಂಡುಬಂದಾಗ ಅವರು ತೋರಿದ ಸಾಮಾಜಿಕ ಪ್ರಜ್ಞೆ ನನ್ನನ್ನು ದಿಙ್ಮೂಢಗೊಳಿಸಿದೆ! ಹಣ್ಣು ಹಂಪಲು, ತರಕಾರಿ ಮಾರುವವರೆಲ್ಲ ತಮ್ಮ ಹತ್ತಿರ ಕೂಡಿಬಿದ್ದ ಚಿಲ್ರೆ ನೋಟುಗಳನ್ನು ಇವರಿಗೆ ಹಾಕುತ್ತಾರೆ. ಅತೀ ಕಳಪೆ ನೋಟುಗಳನ್ನು ಪಡೆದು ಇವರು ಹೊಚ್ಚ ಹೊಸ ನೋಟುಗಳ ವಿತರಣೆ ಪ್ರಾರಂಭಿಸಿದರು... ಎನ್ನುತ್ತಿದ್ದಂತೆ, ಟಿಪ್ಪಣಿ ಮಾಡಿಕೊಳ್ಳುವದನ್ನು ನಿಲ್ಲಿಸಿ, ಸರಕಾರವೇ ಕಿರಿಮೌಲ್ಯದ ನೋಟುಗಳ ಮುದ್ರಣ ನಿಲ್ಲಿಸಿದಾಗ ಕಾಮತರ ಹತ್ತಿರ ಹೊಸ ನೋಟುಗಳು ಹೇಗೆ ಬಂದವು? ಅರ್ಧವಿಸ್ಮಯ, ಅರ್ಧಸಂದೇಹದ ಪ್ರಶ್ನೆಯನ್ನು ಕೇಳಿದರು ಸಂಶೋಧಕರು.

"ಇವರ ಆಪ್ತರೆಲ್ಲ ವಿವಿಧ ಬ್ಯಾಂಕ್‌ಗಳಲ್ಲಿ ಅಧಿಕಾರಿಗಳಾಗಿದ್ದಾರೆ. ಹಿಂದೊಮ್ಮೆ ಹೊಸಹೊಸ ನೋಟುಗಳು ಸಿಗುತ್ತಿದ್ದ ದಿನಗಳಲ್ಲಿ ಮನೆಯಲ್ಲಿ ದಾಸ್ತಾನಾದ ಕಿರಿಬೆಲೆಯ ನೋಟುಗಳನ್ನು ಇವರಿಗೆ ಹಸ್ತಾಂತರಿಸಿ ಬಡ್ಡಿಯನ್ನು ಪ್ರತಿತಿಂಗಳು ಕಳೆದುಕೊಳ್ಳಬೇಕೇ? ಎಂದು ಲೆಕ್ಕಾಚಾರ ಹಾಕಿದ್ದರು. ರಾಯರು ಬಡ್ಡಿಯ ಬಗ್ಗೆ ತಲೆಕೆಡಿಸಿಕೊಳ್ಳುವವರಲ್ಲ. ಬಂದ ನೋಟುಗಳನ್ನು ತಮ್ಮ ಮನೆ ಖಜಾನೆಗೆ ಸೇರಿಸಿ, ಒಂದು ದಶಕಕ್ಕೂ ಮೀರಿದ ಅವಧಿಯಲ್ಲಿ ಆ ಬಗ್ಗೆ ಮರೆತೇ ಬಿಟ್ಟಿದ್ದರು. ಈಗ, ಅವುಗಳ ಸಮರ್ಪಕ ವಿತರಣೆಯಾಯಿತೆಂದು ಅಭಿಮಾನ ಪಡುತ್ತಿದ್ದಾರೆ" ನಾನೆಂದೆ.

"ಹರಿದ ನೋಟುಗಳ ದಾಸ್ತಾನು ಏನು ಮಾಡಿದರು? ಅವನ್ನು ಪೆಟ್ಟಿಗೆಗೆ ಸೇರಿಸುವ ಜಾಯಮಾನದವರಲ್ಲ ಕಣ್ರಿ! ಸೋಪ್ ನೀರು ಅಥವಾ ಎಸಿಟೋನ್ ಹಾಕಿ ತೊಳೆದು ಹರಿದ ಭಾಗಕ್ಕೆ ಸೆಲ್ಲೊ ಟೇಪ್ ಹಚ್ಚಿ ತಮ್ಮ ಮನೆ ಖಾತೆಗೆ ಸೇರಿಸಿದರು. ನಂತರ ರಿಝರ್ವ‌ಬ್ಯಾಂಕಿಗೆ ದಾಟಿಸಿ ಗಂಟೆಗಟ್ಲೆ ಕ್ಯೂ ನಿಂತು ಬದಲಿ ನಾಣ್ಯಗಳನ್ನು ಪಡೆದರು. ರಿಝರ್ವ ಬ್ಯಾಂಕಿನ ಸಂಚಾರಿ ವಾಹನ, ಬೆಂಗಳೂರಿನ ಯಾವ ಯಾವ ಬಡಾವಣೆಗೆ ಹೋಗಿದೆಯೆಂದು ಪತ್ತೆ ಹಚ್ಚಿ, ಅಲ್ಲಿ ಹೋಗಿ ಹೊಸ ನಾಣ್ಯಗಳನ್ನು ಪಡೆದಿದ್ದಾರೆ!"

ರಾಯರ ಮೌಲ್ಯಮಾಪನದ ಈ ಹೊಸ ಮುಖವನ್ನು ಪರಿಚಯಿಸಿದೆ. ಸುಬ್ರಮ್ಹಣ್ಯ ಟಿಪ್ಪಣಿ ಮಾಡಿಕೊಳ್ಳುತ್ತ "ಡಾ। ಕಾಮತರ ಜೀವನೋಪಾಯದ ವೃತ್ತಿ ಯಾವುದೆಂದು ಅರಿಯಬಹುದೇ?" ಎಂದು ಕೇಳಿದರು. ಈ ಪ್ರಶ್ನೆಗೆ ಉತ್ತರ ನೀಡುವದು ಕಷ್ಟಕ್ಕಿಟ್ಟುಕೊಂಡಿತು. "ಸ್ನಾತಕೋತ್ತರ ಅಭ್ಯಾಸ ಮುಗಿಸಿದ ಬಳಿಕ ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಎರಡು ವರ್ಷ ಅಧ್ಯಾಪನ. ಅಮೇರಿಕೆಗೆ ಡಾಕ್ಟರೇಟಗೆ ಪಯಣ. ಮರಳಿದ ಬಳಿಕ ಮೂರುವರ್ಷ ಉದಯಪುರ ಕೃಷಿ ವಿಶ್ವವಿದ್ಯಾಲಯದಲ್ಲಿ ಬೋಧನೆ. ನಂತರ ಎರಡು ವರ್ಷಕಾಲ ಕಾಮನವೆಲ್ತ್ ಸಂಸ್ಥೆಯ ಜೈವಿಕಕೀಟ ನಿಯಂತ್ರಣ ಸಂಸ್ಥೆಯಲ್ಲಿ ಸಂಶೋಧನಾಧಿಕಾರಿ. ಆ ಬಳಿಕ ದರ್ಪದ ಮೇಲಧಿಕಾರಿಯ ವರ್ತನೆ ಸರಿಬಾರದೇ, ನೌಕರಿ ತನ್ನ ಜಾಯಮಾನಕ್ಕೆ ಸರಿಹೋಗದು! ಎಂದು ಮನಗಂಡು, ಈಗ್ಗೆ ಮೂರು ದಶಕಗಳಿಂದ ಮಲ್ಲೇಶ್ವರಂದಲ್ಲಿ ವೈಜ್ಞಾನಿಕ ಛಾಯಾಗ್ರಹಣ ವೃತ್ತಿಯನ್ನು ಸ್ವತಂತ್ರವಾಗಿ ನಡೆಸುತ್ತಿದ್ದಾರೆ. ವಿಜ್ಞಾನಿ ಬಂಧುಗಳಿಗೆ ತಮ್ಮಿಂದಾದ ಸಹಾಯ ಸಲ್ಲಿಸುತ್ತಿದ್ದಾರೆ" ಸಂಕ್ಷೇಪ ಪರಿಚಯ ನೀಡಿದೆ.

"ಇಷ್ಟೆಲ್ಲ ವೃತ್ತಿಗಳ ಬದಲಾವಣೆ, ಪ್ರವಾಸ ಚಟುವಟಿಕೆಗಳಲ್ಲಿ ಇನ್ನಿತರ ಹವ್ಯಾಸಗಳನ್ನು ಹೇಗೆ ಬೆಳೆಸಿಕೊಂಡರು?" ಅವರ ಪ್ರಶ್ನೆ.

"ಅವರಿಗೆ ಕೈಕೊಂಡ ಕೆಲಸ ಬಿಟ್ಟರೆ ಬೇರೆ ಆಕರ್ಷಣೆಗಳು ಇಲ್ಲ. ಮೊದಲ ಪುಸ್ತಕವಾದ ಪ್ರವಾಸಕಥನ ಬರೆಯುವ ಮೊದಲು ಸಾಹಿತ್ಯದತ್ತ ಅವರ ಒಲವೇ ಇರಲಿಲ್ಲ. ಆದರೆ ಈ ಕೃತಿಯೇ ಅತ್ಯಂತ ಜನಪ್ರಿಯವಾಯಿತು. ನಂತರ ವಿವಿಧ ವಿಷಯಗಳ ಮೇಲೆ ಇಪ್ಪತ್ತು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ತಾನು ನೋಡಿದ ಪ್ರದೇಶಗಳ ಜನಜೀವನ ಕುರಿತು ಸಹಸ್ರಾರು ಚಿತ್ರಗಳನ್ನು ಸೆರೆಹಿಡಿದು ದಾಖಲೆ ಸ್ಥಾಪಿಸಿದ್ದಾರೆ. ಚಿತ್ರ, ರೇಖಾಚಿತ್ರ, ಛಾಯಾಚಿತ್ರಗಳೆಲ್ಲ ಅವರ ಆಸಕ್ತಿಯ ಕ್ಷೇತ್ರಗಳು" ಹೆಮ್ಮೆಯಿಂದ ಹೇಳಿದೆ.

"ಡಾ॥ ಕಾಮತರ ಪ್ರತಿಭೆಯನ್ನು ದೂರದರ್ಶನದವರು ಬಳಸಿಕೊಳ್ಳಲಿಲ್ಲವೇ?"

"ರೇಡಿಯೋ ದೂರದರ್ಶನಗಳಿಗಿಂತ ತುಂಬ ಮುಂದೆ ಹೋಗಿದ್ದಾರೆ. ಇಂದಿನ ದಿನಗಳಲ್ಲಿ ನಮ್ಮ ಕುಟುಂಬದ್ದೇ ಇಂಟರ್‌ನೆಟ್ ವೆಬ್‌ಸೈಟ್ ಇದೆ. ಅದಕ್ಕಾಗಿ ಪ್ರತಿವಾರ ಲೇಖ+ಚಿತ್ರಗಳನ್ನು ಕಳಿಸುತ್ತ ಇರುತ್ತಾರೆ. ಇದಕ್ಕಾಗಿ ಛಾಯಾಗ್ರಹಣ ಮಾಡುತ್ತ, ಕೊಳಚೆ ಪ್ರದೇಶ, ಭಿಕ್ಷುಕರ ತಾಣ, ಓಣಿ, ಕೇರಿಗಳನ್ನು ಅಲೆಯುತ್ತ ಇರುತ್ತಾರೆ. ಇಂಥ ಸಂದರ್ಭಗಳಲ್ಲಿ ಅನೇಕರಿಗೆ ತಮಗೆ ಬೇಕಾದ ವಿಳಾಸ ಸಿಗದೇ ಕಷ್ಟಪಡುವಾಗ, ರಾಯರ ಪರೋಪಕಾರ ಬುದ್ಧಿ ಜಾಗೃತವಾಗುತ್ತದೆ. ನಿಮ್ಮಂತೆ ವಿಳಾಸ, ಮನೆ ನಂಬರು ಇತ್ಯಾದಿಗಳನ್ನು ಹುಡುಕಿಕೊಂಡು ಬರುವವರ ಸಲುವಾಗಿ, ಮಲ್ಲೇಶ್ವರಂ ಬಡಾವಣೆಯ, ದೊಡ್ಡ ನಕಾಶೆ ರಚಿಸಿದ್ದಾರೆ. ಅದರಲ್ಲಿ ಮುಖ್ಯ ಮತ್ತು ಅಡ್ಡರಸ್ತೆಗಳನ್ನು ಕಾಣಿಸಿದ್ದಾರೆ. ಪ್ರತಿಯೊಂದು ಕಟ್ಟಡದ ಹಳೆಯ ಮತ್ತು ಹೊಸ ನಂಬರುಗಳನ್ನು ನಮೂದಿಸಿ ಇಟ್ಟುಕೊಂಡಿದ್ದಾರೆ. ಇವುಗಳ ನೆರವಿನಿಂದ ಪ್ರತಿದಿನ ಕನಿಷ್ಠ 10 ಜನಕ್ಕೆ ಮನೆ ಹುಡುಕಲು ಸಹಾಯ ಮಾಡುತ್ತಾರೆ. ಎಷ್ಟೋ ವಾಹನ ಚಾಲಕರು ಬಂದು ಇವರ ನೆರವು ಪಡೆಯದೇ ಇರುವುದಿಲ್ಲ......ಎನ್ನುತ್ತಿದ್ದಂತೆ, ಇಂಥ ಪರೋಪಕಾರಿ ರಾಯರು ನನಗೂ ಉಪಕಾರ ಮಾಡುವಂತಿದ್ದರೆ...." ಆಗಂತುಕರು ಉದ್ಗರಿಸುತ್ತಿದ್ದಂತೆ ಡೋರ್ ಕೀ ತಿರುವಿ, ರಾಯರು ಒಳಗೆ ಬಂದರು.

ತಬ್ಬಿಬ್ಬಾದ ಆಗಂತುಕರನ್ನು ಉದ್ದೇಶಿಸಿ, "ಏನ್ರಿ? ಡಾ॥ ಕೃಷ್ಣಾನಂದ ಕಾಮತರ ಮನೆ ಸಿಕ್ಕಿತೇ?" ಎಂದು ತುಂಟ ಧ್ವನಿಯಲ್ಲಿ ವಿಚಾರಿಸಿದರು. "ತಪ್ಪಾಯಿತು ಸಾರ್! ನಾನು ಹುಡುಕುತ್ತಿರುವ ವ್ಯಕ್ತಿ ತಾವೇ! ಎಂದು ಕನಸು-ಮನಸಿನಲ್ಲಿಯೂ ಎಣಿಸಿರಲಿಲ್ಲ. ಇಲ್ಲಸಲ್ಲದ ಪ್ರಶ್ನೆಗಳನ್ನೆಲ್ಲ ಕೇಳಿದೆ. ನಿಮ್ಮ ಬಹುಮುಖ ಪ್ರತಿಭೆಯ ಆಳವನ್ನು ಭೇದಿಸಿ ಮಹಾಪ್ರಬಂಧ ಬರೆಯಲಾದೀತೆ? ಎಂಬ ಸಂಶಯ ಕಾಡಲಾರಂಭಿಸಿದೆ! ಒಂದಾನು ವೇಳೆ ಅದು ಸಾಧಿಸದಿದ್ದರೆ, ನಿಮ್ಮ ವಿನೋದ-ವ್ಯಕ್ತಿತ್ವವನ್ನೆ ಎತ್ತಿ ಹಿಡಿದು, ಇಂದು ನಡೆದ ಘಟನೆಯನ್ನೆ ಹಿನ್ನೆಲೆಯಾಗಿ ಬಳಸುತ್ತೇನೆ. ತಾವು ಒಪ್ಪಿಗೆ ನೀಡಬೇಕು" ನಮ್ರತೆಯಿಂದ ಸುಬ್ರಹ್ಮಣ್ಯ ನುಡಿದರು. "ನಿಮಗೆ ಡಾಕ್ಟರೇಟು ಸುಲಭದಲ್ಲಿ ಸಿಗಬೇಕೆಂದರೆ, ಯಾವನೊಬ್ಬ, ಕವಿ ಕಾದಂಬರಿಕಾರರನ್ನು ಆರಿಸಿಕೊಳ್ಳಿ, ನನ್ನಂಥವನ ಬೆನ್ನು ಹಿಡಿದರೆ, ಗೊಂದಲಪುರದಲ್ಲಿ ಅಲೆದೇ ದಣಿಯುತ್ತೀರಿ! ಸದ್ಯಕ್ಕಂತೂ ಕೈಕಾಲು ತೊಳೆದು ಊಟಕ್ಕೇಳಿ!" ಮನಃಪೂರ್ವಕವಾಗಿ ಅತಿಥಿಯನ್ನು ಉಪಚರಿಸಿದರು. "ನನಗೇನೂ ಪಿಹೆಚ್.ಡಿ. ಡಿಗ್ರಿಯ ಅಗತ್ಯವಿಲ್ಲ. ನಿಗೂಢನಲ್ಲದ ಇಂಥ ಓರ್ವರ ಅಂತರಾಳ ಅರಿಯುವುದೇ ಮಹಾಭಾಗ್ಯ!" ಎಂದಾಗ ನಾವು ಮೂವರೂ ಬೇರೆ ಬೇರೆ ಕಾರಣಕ್ಕಾಗಿ ನಕ್ಕೆವು.

■

# ರಾಯರ ಹೊಸ ತಾರೀಫು

**"ಹೊಸ ಪೀಳಿಗೆಗೆ ಶಾಶ್ವತ ಕೊಡುಗೆ ನೀಡಲು ಹಣ್ಣು ತರಕಾರಿ ಮಾರುವವರನ್ನು ಕ್ಲಿಕ್ಕಿಸಿದ ರಾಯರು ಕೊನೆಗೆ ಪೋಲಿಸ್ ಠಾಣೆ ದರ್ಶನ ಮಾಡಬೇಕಾಯಿತು."**

"ರೀ ರೀ" ಮೂರು ದಶಕಗಳಿಂದ ಬಿಡದೇ ಬಳಸುತ್ತಿದ್ದ ರಾಯರ ಖಟಾರ್ ಕನ್ನಡ ಬೆರಳಚ್ಚಿನ ಯಂತ್ರದ ಸದ್ದಿನೊಂದಿಗೆ ಸ್ಪರ್ಧಿಸಿ ಜೋರಾಗಿ ಕೂಗಿದೆ. ಎಂದಿನಂತೆ ಬೆಳ್ಳುಳ್ಳಿ ಸುಲಿದು ಕೊಡಲು ಇಲ್ಲವೇ ಈರುಳ್ಳಿ ಹೆಚ್ಚಿಕೊಡಲು ಮಡದಿ ಕರೆಯುತ್ತಿರುವಳೆಂದು ಭಾವಿಸಿ ರಾಯರು "ಐದೇ ನಿಮಿಷದಲ್ಲಿ ಬಂದುಬಿಡುತ್ತೇನೆ" ಎಂದು ಆಶ್ವಾಸನೆ ನೀಡಿದರು. ಆದರೆ ವಿಷಯ ಬೆಳ್ಳುಳ್ಳಿ-ಈರುಳ್ಳಿಗಳಿಗಿಂತ ಗಹನವಾಗಿದ್ದರಿಂದ ನಾನೇ ಅವರು ಇದ್ದಲ್ಲಿಗೆ ಹೋಗಿ ಮಾತಿನ ಸುರಿಮಳೆ ಪ್ರಾರಂಭಿಸಿದೆ. "ಐವತ್ತು ವರ್ಷದ ನಿಮ್ಮ ಹುಟ್ಟುಹಬ್ಬ ಆಚರಿಸೋಣ ಎಂದಾಗ, ಅರವತ್ತನ್ನು ಕಾಣುವ ಭರವಸೆಯೇ ಇಲ್ಲದವರು ಮಾತ್ರ ಅದನ್ನು ಆಚರಿಸುತ್ತಾರೆ, ಅಂದ್ರಿ! ಷಷ್ಟ್ಯಬ್ಧಿಯ ಶಾಂತಿಮಾಡಿ ಆಚರಿಸೋಣ ಎಂದಾಗ, ಹಾಗೆ ಮಾಡಿದವರೆಲ್ಲ ಮರುವರ್ಷವೇ ಯಮಪುರಿಗೆ ಫ್ಲೈಟ್ ಮಾಡಿದ್ದಾರೆ ಎಂದು ಉದಾಹರಣೆ ಸಹಿತ ಸಾರಿದ್ರಿ!... ಸದ್ಯದಲ್ಲಿ ನಿಮಗೆ ಅರವತ್ತೈದು ಸಂವತ್ಸರಗಳು ತುಂಬಲಿವೆ. ಇದನ್ನಾದರೂ ಸಾಂಗವಾಗಿ ಆಚರಿಸೋಣವೆ?..." ಎಂದು ರಾಗ ಎಳೆದು ಮುಗಿಸುವ ಮೊದಲೇ, "ನೀನು ಕನಸು-ಮನಸಿನಲ್ಲೂ ಎಣಿಸದಷ್ಟು ವೈಶಿಷ್ಟ್ಯಪೂರ್ಣವಾಗಿ, ಭಾವೀ ಪೀಳಿಗೆಯವರು ನೆನಪಿಡುವಷ್ಟು ಅದ್ದೂರಿಯಾಗಿ ಆಚರಿಸಲೇಬೇಕೆಂದು ಅದಾಗಲೇ ದೃಢಸಂಕಲ್ಪ ಮಾಡಿಕೊಂಡಿದ್ದೇನೆ" ರಾಯರೆಂದರು. ಹುಟ್ಟುಹಬ್ಬವೆಂದು ಒಳ್ಳೆ ಹೋಟೇಲಿನಲ್ಲಿ ಊಟ, ರೇಶ್ಮೆ ಸೀರೆ (ನನಗೆ!) ಹಾಗೂ ದಿನವಿಡೀ ನಿಶ್ಚಿಂತೆಯ ತಿರುಗಾಟ ಎಂದು ಹಿಗ್ಗಿದರೂ, ರಾಯರು ಇವಾವುವನ್ನೂ ಪಾಲಿಸುವವರಲ್ಲ ಎಂದು ಮನಗಂಡಿದ್ದರಿಂದ ಈ ಹುಟ್ಟುಹಬ್ಬದ ಹೊಸಬಗೆಯ ಆಚರಣೆ ಎಂಥ ಬಗೆಯದೆಂದು ಅರಿಯಲು ಪರಿಪರಿಯಿಂದ ಯತ್ನಿಸಿದಾಗ ತಮ್ಮ ಮನದ ಇಂಗಿತವನ್ನು ಹೊರಹಾಕಿದರು.

"ಕೇಳೆಲೇ ಕಾಂತೆ! ಕಳೆದ ಅರ್ಧಶತಮಾನದಿಂದ ಛಾಯಾಗ್ರಹಣ ಮಾಡುತ್ತ ಬಂದಿದ್ದೇನೆ. ಅವನ್ನೆಲ್ಲ ಹಲವರು ಹಲಬಗೆಯಲ್ಲಿ ಹೊಗಳಿದರೂ ಅದು ನನಗೆ ನಿಜವಾದ ಸಂತೋಷ ನೀಡಿರಲಿಲ್ಲ! 19 ಹಾಗೂ 20ನೇ ಶತಮಾನದ ಆದಿಯ ಮಾನವರು-ಭಾರತೀಯರು ಹೇಗೆ ಜೀವಿಸುತ್ತಿದ್ದರು, ಎಂದು ಅಂದಿನ ಪಾಶ್ಚಾತ್ಯರು ಬಿಟ್ಟು ಹೋದ ಛಾಯಾಚಿತ್ರಗಳು ಅತ್ಯಮೂಲ್ಯವಾಗಿಲ್ಲವೆ? ಈಗಂತೂ ನಮ್ಮ ದೇಶವಾಸಿಗಳು ಮಿಂಚಿನವೇಗದಲ್ಲಿ ಬದಲಾಗುತ್ತಿದ್ದಾರೆ! ಶತಮಾನಗಳಿಂದ ಉಳಿಸಿಕೊಂಡು ಬಂದ ರೀತಿ-ರಿವಾಜುಗಳನ್ನು ಕೈಬಿಡುತ್ತಿದ್ದಾರೆ. ಆದ್ದರಿಂದ ಅವರ ಇಂದಿನ ಇರುವನ್ನು ವರ್ಣಚಿತ್ರಗಳಲ್ಲಿ ಸೆರೆಹಿಡಿದು, ಮುಂದಿನ ಪೀಳಿಗೆಯವರಿಗೆ ಹೊಸ ಪೀಳಿಗೆಯವರಿಗೆ ನನ್ನ ಶಾಶ್ವತ ಕೊಡುಗೆ ನೀಡಬೇಕೆಂದಿದ್ದೇನೆ" ಎಂದು ಹೇಳಿದಾಗ, ಅವರ 'ಶಾಶ್ವತ ಕೊಡುಗೆ'ಯ ಹಿಂದು-ಮುಂದುಗಳನ್ನು ಅರ್ಥೈಸಲಾಗಲೇ ಇಲ್ಲ! ನನ್ನ ಸಮಾಧಾನಕ್ಕಾಗಿ

ಪಾಯಸ, ಚಿತ್ರಾನ್ನಗಳನ್ನು ಹುಟ್ಟು ಹಬ್ಬಕ್ಕೆ ಮಾಡಿ ನಾನೇ ತಿಂದು ತೇಗಿದೆ. ರಾಯರಿಗೆ ಸಿಹಿ ತಿನ್ನಕೂಡದು! ಎಂದು ಡಾಕ್ಟರರು ಕಟ್ಟಪ್ಪಣೆ ವಿಧಿಸಿದ್ದಾರಲ್ಲ!

ಈಗ ರಾಯರು, ದಶಕಗಳಿಂದ ಸಂಗ್ರಹಿಸುತ್ತ ಬಂದಿದ್ದ ಏಳು ಕ್ಯಾಮರಾಗಳನ್ನು ಅವುಗಳ ಅಡಗುದಾಣಗಳಿಂದ ಹೊರಗೆಳೆದರು. ನಲವತ್ತು ವರ್ಷಗಳ ಹಿಂದೆ ಜರ್ಮನಿಯ ಬರ್ಲಿನ್ ನಗರದಲ್ಲಿ ಕೊಂಡುಕೊಂಡ 'ಎಕ್ಸಾಕ್ಟಾ' ಕ್ಯಾಮರಾ, ತೀರ ಮುದಿಯಾದರೂ ತನ್ನೊಡೆಯ, ಕರಿಯ ಕಬ್ಬನ್ನು ಜಗಿದು ತಿನ್ನುವ ರಾಯರಂತೆ ಹರೆಯದ ಹುಮ್ಮಸ್ಸು ಉಳ್ಳದ್ದು! ಅಗ್ಗವಾಗಿ ಸಿಕ್ಕಿದೆ ಎಂದುಕೊಂಡ 'ವೈಟ್‌ಲ್ಯಾಂಡರ್' ಮೊದಲ ದಿನವೇ ಕೈಕೊಂಡ ಮುಷ್ಕರ ಯಥಾ ಪ್ರಕಾರ ಮುಂದುವರಿಸಿಕೊಂಡು ಬಂದಿದೆ. ಜಪಾನಿ ಮಹಿಳೆಯರ ಸುಕೋಮಲ ಕರಗಳಿಗಷ್ಟೇ ಒಗ್ಗಿಕೊಂಡ 'ಯಶಿಕಾ' ಪರಪುರುಷ, ರಾಯರ ಸ್ಪರ್ಶ ಮಾತ್ರದಿಂದಲೇ ಬೆಚ್ಚಿಬಿದ್ದು ಕಾಯಂ ಅರ್ಧ ಪ್ರಜ್ಞಾವಸ್ಥೆಯಲ್ಲಿದೆ! ಸ್ವಯಂಚಾಲಿತ ಸರ್ವಾಂಗಗಳನ್ನು ಹೊಂದಿದ 'ಒಲಿಂಪಸ್' ರಾಯರು ಆಜ್ಞಾಪಿಸಿದ ಛಾಯಾಚಿತ್ರವನ್ನು ಸೆರೆಹಿಡಿಯುವ ಬದಲಾಗಿ, ತನಗೆ ಒಪ್ಪಿಗೆ ಯಾದುದನ್ನು ಮಾತ್ರ ಕ್ಲಿಕ್ಕಿಸಿ ಸರ್ವತಂತ್ರ ಸ್ವತಂತ್ರ ತಾನೆಂದು ತೋರಿಸಿಕೊಂಡು, ಅತೃಪ್ತಿಗೆ ಕಾರಣವಾಗಿದೆ! 'ಎಕ್ವಾ' ತಾನು ಕ್ಷಿತಿಜದಷ್ಟು ದೂರದ ಬಿಂಬವನ್ನು ಮಾತ್ರ ಚಿತ್ರಿಸಬಲ್ಲೆ ಎಂದು ಘೋಷಿಸಿ ಸುಮ್ಮನಾಗಿದೆ. ಪ್ರಖರವಾದ ಬಿಸಿಲು, ಬೆಳಕಿನಲ್ಲಿ ಮಾತ್ರ ನನಗೆ ಕೆಲಸದ ರೂಢಿ ಎಂದು 'ಮಿನೋಲ್ಟಾ' ಡಂಗುರ ಸಾರಿದೆ. ಯಾವ ರೋಗ, ದಮ್ಮು, ಕೆಮ್ಮುಗಳಿಲ್ಲದೇ ಇದ್ದ 'ಪೆಂಟೆಕ್ಸ್' ಕ್ಯಾಮರಾ ಒಂದೇ ಸೇವೆಗೆ ಸದಾ ಸಿದ್ಧವಾಗಿ ಇದೆಯೆ? ಎಂದು ಅದರ ಅಂಗಾಂಗ ಗಳನ್ನೆಲ್ಲ ಶುಚಿಗೊಳಿಸಿ, ಪ್ರಯೋಗಿಸಿ ನೋಡಿ ರಾಯರು ನೆಮ್ಮದಿಯ ಉಸಿರು ಬಿಟ್ಟರು.

ಥೋಕ ಬೆಲೆಯಲ್ಲಿ ಕೊಂಡು ತಂದು ಕಪ್ಪು-ಬಿಳುಪು ಫಿಲ್ಮ್ ರಾಯರ ಸಂಗ್ರಹದಲ್ಲಿ ಸಾಕಷ್ಟು ಇದ್ದರೂ ಇಂದಿನದು ವರ್ಣರಂಜಿತ ಜಗತ್ತು, ಆದ್ದರಿಂದ ಅದನ್ನು ಬಳಸುವಂತೆ ಇರಲಿಲ್ಲ. ಅಂತೆಯೇ ಕಲರ್‌ಫಿಲ್ಮ್‌ನ ಸಗಟು ಖರೀದಿಗಾಗಿ ರಾಯರ ಅಲೆದಾಟ ಪ್ರಾರಂಭವಾಯಿತು. ಒಂದು ನೂರು ರೋಲ್‌ಗಳು ಮನೆಗೆ ಬಂದವು. ನಾನು ಗಾಬರಿಯಾಗಿ, "ಈಗಲೇ ಅರಳು-ಮರಳು ಶುರುವಾಗಿಲ್ಲವಷ್ಟೆ? ಇವನ್ನೆಲ್ಲ ಕೊಂಡ ಒಂದೇ ವರ್ಷದಲ್ಲಿ ಬಳಸಬೇಕೆಂಬ ಸೂಚನೆಯನ್ನು ಸ್ಪಷ್ಟವಾಗಿ ಕಾಣಿಸಲಾಗಿದೆ. ಈ ಅವಧಿಯಲ್ಲಿ ಐದಾರನ್ನು ಬಳಸಿದರೇ ಒಂದು ದೊಡ್ಡ ಸಾಧನೆ! ಎಂದು ಕೆಣಕಿದೆ. "110 ರೂ. ಬೆಲೆ ಬಾಳುವ ರೋಲನ್ನು ಕೇವಲ 70 ರೂಪಾಯಿಗೆ ಒಂದರಂತೆ ಗಿಟ್ಟಿಸಿದ್ದೇನೆ! ಇಷ್ಟಾಗಿಯೂ ಹಣದ ಅಪವ್ಯಯ ಮಾಡಿದ್ದೇನೆ ಅನಿಸಿದರೆ 'ಅನಿಸಿಕೆ ಸ್ವಾತಂತ್ರ್ಯ' ನಿನಗಿದೆ. ನಮ್ಮ ವೈವಾಹಿಕ ಜೀವನದ 35 ವರ್ಷಗಳಲ್ಲಿ ದಿನಕ್ಕೆ ಒಂದು ಕಪ್ ಕಾಫಿ ಹೆಚ್ಚು ಕುಡಿದಿದ್ದರೆ ಅದೆಷ್ಟು ಖರ್ಚು ಹೆಚ್ಚುತ್ತಿತ್ತು ಎಂದು ಲೆಕ್ಕಹಾಕು. ಈ ಉಳಿತಾಯದ ಬಡ್ಡಿಯಿಂದಲೇ ಈ ಫಿಲ್ಮ್ ಕೊಂಡಿದ್ದೇನೆ! ನಿನ್ನ ಆಕ್ಷೇಪಣೆಗೆ ಸೊಪ್ಪು ಹಾಕುವುದಿಲ್ಲ" ಎಂದು ಹಣದ ಲೆಕ್ಕಾಚಾರದಲ್ಲಿ ನನಗಿದ್ದ ಅಜ್ಞಾನದ ಪೂರ್ಣ ಲಾಭವನ್ನು ರಾಯರು ಫಿಲ್ಮ್ ಖರೀದಿಗೆ ಬಳಸಿಕೊಂಡರು.

ಕ್ವಚಿತ್ತಾಗಿ ಮನೆ ಬಿಟ್ಟು ಹೊರಗೆ ಹೋಗುತ್ತಿದ್ದವರು ಈಗ ಮನೆಯಲ್ಲಿರುವುದೇ ವಿರಳವಾಯಿತು. ಕ್ಯಾಮರಾ ಹೊತ್ತು ದಿನವಿಡೀ ಅಲೆಯುವುದು, ದಣಿದು ಬೆಂಡಾಗಿದ್ದರೂ ಅತ್ಯಂತ ಉತ್ಸಾಹದಿಂದ ಅಂದಿನ ಛಾಯಾಗ್ರಹಣದ ಸಾಹಸಗಳನ್ನು ಬಣ್ಣಿಸುವುದು ರಾಯರ ದಿನಚರಿಯ ಭಾಗವಾದವು. "ಭಾಗ್ಯಳನ್ನು ಛಾಯಾಗ್ರಹಣಕ್ಕೆ ಒಪ್ಪಿಸಲು ಬಲೇ ಕಷ್ಟ ಪಡಬೇಕಾಯಿತು! ಅವಳನ್ನು ಬೇರೆ ಬೇರೆ 'ಪೋಸ್'ನಲ್ಲಿ ನಿಲ್ಲಿಸಿ ಕ್ಲಿಕ್ಕಿಸಿದ ನಂತರ, ಮೊದಲಿಗೆ ಹಿಂಜರಿದ ಇತರರ ಮೈಚಳಿ ಬಿಟ್ಟಿತು. ಅವರೆಲ್ಲ ಸ್ಪರ್ಧೆಯಿಂದ ನನ್ನ

'ಮಾಡೆಲ್' ಆಗಲು ಮುಂದೆ ಬಂದರು. ಬಂದವರಲ್ಲಿ ಫೋಟೋಗೆ ಇಷ್ಟೂ ಸರಿಹೊಂದದವರೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. 'ಕ್ಯಾಮರಾ ಕ್ಲಿಕ್ಕಿಸಲಿಲ್ಲ. ಮುಖದ ಮೇಲೆ 'ಝುಗ್' (ಫ್ಲ್ಯಾಶ್) ಆಗಲಿಲ್ಲ!' ಎಂದು ಅವರೆಲ್ಲ ಅಸಂತುಷ್ಟರಾಗಿದ್ದಾರೆ. ಸಾಲದ್ದಕ್ಕೆ ಕ್ಲಿಕ್ಕಿಸಿಕೊಂಡವರೆಲ್ಲ ಫೋಟೊ ಪ್ರತಿಗಳನ್ನು ಕೇಳಲಾರಂಭಿಸಿದ್ದಾರೆ! ಒಬ್ಬಳಿಗೆ ಎನಲಾರ್ಜ್ ಕಾಪಿ ಬೇಕಿದ್ದರೆ, ಇನ್ನೊಬ್ಬಾಕೆಗೆ ಹತ್ತು ಪ್ರತಿ ಬೇಕಂತೆ. ಮಗುದೊಬ್ಬ ಮೂಲ ನೆಗೆಟಿವನ್ನೆ ತನಗೊಪ್ಪಿಸಲು ಪಟ್ಟುಹಿಡಿದಿದ್ದಾನೆ. ಅವರೆಲ್ಲರ ಬೇಡಿಕೆಗಳಿಗೆ ಸೊಪ್ಪು ಹಾಕಿಲ್ಲ! ಹೀಗಾಗಿ ಊಹಾಪೋಹಗಳು ಪ್ರಾರಂಭವಾಗಿವೆ. ಮೊನ್ನೆ ಒಬ್ಬ ರಸ್ತೆಯಲ್ಲಿ ತಡೆದು ನಿಲ್ಲಿಸಿ, 'ಏನ್ಸಾರ್, ನಮ್ಮಮ್ಮನ ಫೋಟೊ ಮಾರಿ ಕಾಸು ಮಾಡ್ತಾ ಇದ್ದೀರಾ?' ಎಂದು ಪ್ರಶ್ನಿಸಿದ. ತೊಳೆದ ಕೆಂಡದಂತಿದ್ದ ಅವನ ತಾಯಿಯನ್ನು ನೆನಪಿಸಿಕೊಂಡು. ನಗು ತಡೆದುಕೊಂಡು, "ಏನಯ್ಯಾ? ನೀನೇ ಕಾಸುಕೊಟ್ಟು ನಿಮ್ಮಮ್ಮನ ಫೋಟೊ ಕೊಂಡುಕೋತಿಯಾ? ಇನ್ನಾರಿಗೆ ಮಾರ್ಲಿ ಹೇಳು?" ಎಂದಾಗ ಪೆಚ್ಚಾದ. ನವಿಲುಕೋಸು ಮಾರುವ ನಾಗಮ್ಮ ರಾಮಬಾಣ ಬಿಟ್ಟಳು. "ಫಾರಿನ್‌ನಲ್ಲಿ ಇಂಡಿಯಾದ ಹೆಂಗಸ್ರು ಅಂದರೆ ಭೋ ಇಷ್ಟ ಪಡ್ತಾರಂತೆ! ಅಲ್ಲಿ ಕಳಸ್ತಾ ಇದ್ದೀರಾ?" ನಾನಾಗಿ ಅವರೆಲ್ಲ ಕುಳಿತಲ್ಲಿ ಹೋಗಿ, ಅವರ ಒಪ್ಪಿಗೆ ಪಡೆದು ಫೋಟೊ ತೆಗೆದದ್ದಕ್ಕೆ ಸಿಕ್ಕ ತಿರುವು ನೋಡಿ ನೋವಾಯಿತು. "ಹೌದಮ್ಮ ಹೌದು! ಅವರ ದೇಶದಲ್ಲಿ ಕೆಂಪಗಿನ, ಚೆಂದದ ಹುಡುಗೀರೇ ಇಲ್ಲಾ ನೋಡು! ನಮ್ಮ ರಂಗಿ, ನಿಂಗಿ–ರಂಭೆ–ಊರ್ವಶೀರ ಫೋಟೊ ಎಲ್ಲಾ ಮೈಮೇಲೆ ಬಿದ್ದು ಬಿದ್ದು ಒಂದಕ್ಕೆ ನಾಲ್ಕು ಕಾಸುಕೊಟ್ಟು ಕೊಂಡಕೋತಾರೆ!" ಎಂದು ಕಟುವಾಗಿ ಹೇಳಿದೆ. ಅಂದಿನಿಂದ ಅವರೆಲ್ಲ ಭೇಟಿ ಆಗ್ತಿದ್ದ ಪ್ರತಿದಿನ ಹೋಗುತ್ತಿದ್ದ ಮಾರ್ಗವನ್ನೆ ಬಿಟ್ಟುಬಿಟ್ಟಿದ್ದೇನೆ."

ರಾಯರ ಒಂದೊಂದೆ 'ಕ್ಲಿಕ್' ಸಾಹಸಗಳು ತೆರೆದುಕೊಂಡು ನಿಂತವು!

ಒಂದು ದಿನ ಮಟಮಟ ಮಧ್ಯಾಹ್ನ ಜೋರಾಗಿ ಡೋರ್ ಬೆಲ್ ಕಿರುಚಿತು. ಹೊರಗೆ ಪೋಲಿಸ್ ಪೇದೆ ಏದುಸಿರು ಬಿಡುತ್ತ, ಬೆವರೊರೆಸಿಕೊಳ್ಳುತ್ತ ನಿಂದಿದ್ದ. ರಾಯರು ಗುರುಗುಟ್ಟುತ್ತಲೇ, 'ಏನ್ಸಮಾಚಾರ?' ಎಂದು ಕೇಳಿದರು. "ತಕ್ಷಣ ಬಂದು ನಮ್ಮ ಹವಾಲ್ದಾರರನ್ನು ಕಾಣಬೇಕಂತೆ ಸಾರ್!" ಎಂದ. "ನನಗೆ ಅವರ ಹತ್ತಿರ ಏನೂ ಕೆಲಸವಿಲ್ಲ! ಅವರಿಗೇನಾದರೂ ನನ್ನ ಬಳಿ ಕೆಲಸವಿದ್ದರೆ ಇಲ್ಲಿ ಬಂದು ನನ್ನನ್ನು ಕಾಣಲಿ!" ರಾಯರೆಂದರು.

ಪೇದೆ ಕಕ್ಕಾವಿಕ್ಕಿಯಾದ. ಅತ್ಯಂತ ದೈನ್ಯತೆಯಿಂದ "ಸಾರ್ ನನಗೆ ಹೆಂಡತಿ–ಎರಡು ಮಕ್ಕಳು ಅವ್ರೆ! ಹಿಂದಿನ ನೌಕರಿಯಿಂದ ವಜಾ ಮಾಡಿದಾಗ ಪಟ್ಟಗೋಳು ಹೇಳಲಾಸಲ್ಲ. ಅವರಿವರ ಕಾಲು ಹಿಡಿದು, ಹೆಂಡ್ತಿ ತಾಳಿಮಾರಿ, ಹತ್ತುಸಾವಿರ ಹೊಂದ್ಸಿ ಪೋಲಿಸ್ ಖಾತೆಗೆ ಕೊಟ್ಟು ಸೇರ್ಕೊಂಡಿದೀನಿ. ಇನ್ನೂ ಟೆಂಪರರಿ. ನಮ್ದು ದಿನಗೂಲಿ ಸಾರ್ ದಿನಗೂಲಿ!.....ಆ ಪೋಲಿ ಲಿಂಗ್ರಾಜು, ನೀವು ಅವ್ರ ಹೆಂಗಸರ ಫೋಟೊ ಹಿಡ್ದು ಫಾರಿನ್‌ಗೆ ಕಳಸ್ತಾ ಇದೀರಿ ಅಂತ ಪೋಲಿಸ್ ಕಂಪ್ಲೇಂಟ್ ಕೊಟ್ಟಿದ್ದಾನೆ.. ನಿಮ್ಮ ಮನೆ ಪತ್ತೆ ಮಾಡ್ಲಿಕ್ಕೆ ಎಷ್ಟು ಕಷ್ಟ ಪಟ್ಟಿದೀನಿ ಗೊತ್ತಾ?.... ಯಾರಿಗೂ ನಿಮ್ಮ ಹೆಸ್ರು, ವಿಳಾಸ ಗೊತ್ತಿಲ್ಲ. ಡೇಲಿ ಇದೇ ರಸ್ತೆಯಿಂದ ಹೋಗ್ತಾ ಇರ್ತಾರೆ! ಈಗೊಂದು ತಿಂಗಳಿಂದ ಆಸಾಮಿ ಪತ್ತೆ ಇಲ್ಲ ಅಂದ್ರು, ಹಸಿವತಾಣೆ, ಹೂಕೋಸು ಒಯ್ಯೋರಲ್ಲ... ಬದ್ನೆಕಾಯಿ, ಮೂಲಂಗಿ, ಸೀಮೆಬದ್ನೆಕಾಯಿ ಕೊಳ್ತಾರೆ... ಅದ್ಕೆ ಅವರಿಗೆ 'ಸಸ್ತಾಸಾಮಿ' ಅಂತ ಕರೀತೀವಿ!' ಅಂತ ನಾಗಮ್ಮ ಹೇಳಿದ್ಲು. 'ತುಂಬಾ ಒಳ್ಳೆಯೋರು!' ಗೌರಮ್ಮ ಹೇಳಿದಳು. ಅದಕ್ಕೇ ಅವರೆಲ್ಲಾ ನಿಮ್ಮನ್ನ 'ಬಡೋರ ಸಾಮಿ' ಅಂತಾರಂತೆ! ಗುಡ್ಡೆ ತರ್ಕಾರಿ ಮಾರೋ ಆ ಕುಡ್ಕ ಇದಾನಲ್ಲಾ ಸಾರ್.....

'ದೇವು! ರಾಯರು ಕೂಡಲೇ ನೆನಪಿಸಿದರು. 'ಅಹೂಂ! ಹೂಂ! ಅವನೇ! ಆ ಚೀಲದ ಸೋಮ್ಯೊರಾ? ಯಾವಾಗ್ಲೂನೂ ಅವರು ಸರಿಯಾಗಿ ಎಣ್ಸಿ ಚಿಲ್ರೆ ತಪ್ದೇ ಕೊಡ್ತಿರತಾರೆ. ಅದಕ್ಕೇ ಅವರ್ನ ನಾವು 'ಚಿಲ್ರೆಸಾಮಿ' ಅಂತಾ ಕರೆಯೋದು ಎಂದೂ ಸಿಟ್ಟು ಮಾಡಾಕಿಲ್ಲ ಕಣ್ರಿ! ಅಂತ ಹೇಳ್ತಾನೆ. ಇಷ್ಟೆಲ್ಲಾ ವಿವರಗಳ ಜೊತೆ ತಮ್ಮ ರೂಪ, ಆಕಾರ, ದಿರಿಸು, ಕೈಚೀಲದ ವರ್ಣನೆ ಎಲ್ಲಾ ತಿಳ್ಕೊಳ್ಳೋದು ತುಂಬಾ ಕಷ್ಟಕ್ಕೆ ಇಟ್ಟುಕೊಳ್ತು! ಕೊನೆಗೆ ಒಬ್ಬ ಹುಡುಗನಿಗೆ ಪುಗಸಟ್ಟೆ ತಾವು ಕೊಟ್ಟ ಫೋಟೊ, ತಮ್ಮಿಂದಲೇ ಕವರು ಪಡೆದು ಇಟ್ಟದ್ದು ಸಿಕ್ತು. ಅದರ ಹಿಂದೆ ಇದ್ದ ತಮ್ಮ ವಿಳಾಸ ಸಿಕ್ತು. ಅದರಿಂದಾನೇ ಹವಾಲ್ದಾರ ಸಾಹೇಬ್ರು ಇಲ್ಲಿ ಓಡ್ಸಿ, ತಮ್ಮನ್ನು ಠಾಣೆಗೆ ಕರಕೊಂಡೇ ಬರ್ಬೇಕು ಅಂತ ಅರ್ಡರ್ ಮಾಡವ್ರೆ!......ಈಗ ಹವಾಲ್ದಾರ ಬಗ್ಗೆ ತಾವು ಹೇಳಿದ ಮಾತನ್ನು ಇದ್ದಕ್ಕಿದ್ದ ಹಾಗೆ ಒಪ್ಸಿದ್ರೆ ಸಿಗ್ದು ಹಾಕ್ತಾರೆ! ಶಿವಶಿವಾ! ತಾವೇ ಕಾಯಬೇಕು" ಎಂದು ಕೆಳಗೆ ಕುಳಿತು ಗಳಗಳ ಅತ್ತುಬಿಟ್ಟ.

ಇಂಥ ಅಸಹಾಯಕರನ್ನು ಕಂಡಾಗೆಲ್ಲ ರಾಯರು ಕರಗಿ ನೀರಾಗಿ ಬಿಡ್ತಾರೆ. ಅವನನ್ನು ಎಬ್ಬಿಸಿ ಸಂತೈಸಿ ಖುರ್ಚಿಯಲ್ಲಿ ಕೂಡ್ರಿಸಿ, ಕಾಫಿ ತಿಂಡಿ ತರಲು ನನಗೆ ಹೇಳಿ, ಅವನೊಂದಿಗೆ ಸೇವಿಸಿದರು. ಆ ಬಳಿಕ ತನ್ನ ಕ್ಯಾಮರಾ, ತೆಗೆದ ಛಾಯಾಚಿತ್ರಗಳು, ಪರಿಚಯಪತ್ರ, ವಿಸಿಟಿಂಗ್ ಕಾರ್ಡುಗಳಿಂದ ಸುಸಜ್ಜಿತರಾಗಿ ಆಟೋಹತ್ತಿ ಪೋಲಿಸ್ ಠಾಣೆಗೆ ಹೊರಟೇ ಬಿಟ್ಟರು. ಹವಾಲದಾರನನ್ನು ಭೇಟಿ ಮಾಡಿ ತನ್ನ ಪರಿಚಯದ ಕಾರ್ಡು ಕೈಗಿತ್ತಾಗ ಅದರಲ್ಲಿ ನಮೂದಿಸಿದ ಡಿಗ್ರಿಗಳನ್ನು ನೋಡಿಯೇ ಆತ ಅಂಜಿ ಎದ್ದು ನಿಂತು, ಸೆಲ್ಯೂಟ್ ಹೊಡೆದು ಎ.ಸಿ.ಪಿ. ಹತ್ತಿರ ಕರೆದೊಯ್ದರು. ಅವರೂ ಗಲಿಬಿಲಿಯಿಂದ ಕಾಲುಚಾಚಿ ಕುಳಿತವರು ಎದ್ದುನಿಂತು, ಟೇಬಲ್ ಮೇಲಿದ್ದ ಹ್ಯಾಟು ಧರಿಸಿ, "ತಾವು ಬಂದ ಕೆಲಸದ ಬಗ್ಗೆ ವಿಚಾರಿಸಬಹುದೆ?" ಎಂದು ನಮ್ರತೆಯಿಂದ ವಿಚಾರಿಸಿದರು. "ನಿಮ್ಮ ಠಾಣೆಯವರೇ ನನ್ನನ್ನು ಎಳೆದು ತರಲು ಆಜ್ಞಾಪಿಸಿದ್ದಾರಂತೆ" ಎಂದು ರಾಯರೆನ್ನುತ್ತಿದ್ದಂತೆ, ಕರೆಗಂಟೆ ಬಾರಿಸಿ ನನ್ನ 'ಫ್ಯಾಲ್' ತರುವಂತೆ ಹೇಳಿ, ಪರಾಮರ್ಶಿಸಿ ಹುಬ್ಬುಗಂಟಿಕ್ಕಿ, ಈ ಪೋಲಿಗಳ ದೂರಿಗೆ ಹಿಂದೆ–ಮುಂದೆ ವಿಚಾರಿಸದೇ, 'ಕಿರುಕುಳ' ದೂರು ಕೊಟ್ಟಿದ್ದು ಶುದ್ಧ ತಪ್ಪು! ಎಂದು ಸಾರಿ ರಾಯರ ಕ್ಷಮೆ ಕೇಳಿದರು. ಇವರೋ! ತಮ್ಮ ಕನಸು, ಇತ್ತೀಚಿನ ಸಾಧನೆಗಳ ಕುರಿತು ಹೇಳಿದರು. ಜೊತೆಗೆ ಒಯ್ದು, ತಾವು ಕ್ಲಿಕ್ಕಿಸಿದ ತರಕಾರಿಯವರ, ಹಣ್ಣು ಮಾರುವವರ, ಚಿತ್ರಗಳನ್ನೆಲ್ಲ ಒಂದೊಂದಾಗಿ ತೋರಿಸಿದರು. ಅವನ್ನು ನೋಡಿ ವಿಸ್ಮಯದಿಂದ "ಇವರೆಲ್ಲ ನಮಗೆ ಚಿರಪರಿಚಿತರೇ! ಎಷ್ಟೋ ಬಾರಿ ಅವರ ತಕ್ಕಡಿ, ತೂಕದ ಕಲ್ಲು, ಕೈಗಾಡಿಗಳನ್ನು ಠಾಣೆಗೆ ಸಾಗಿಸಿದೀವಿ. ಅವನ್ನು ಬಿಡಿಸಿಕೊಳ್ಳಲು ಬರುತ್ತಲೇ ಇರುತ್ತಾರೆ! ಅಂಥಾ ಕಾಡು, ಕಗ್ಗರನ್ನು ಒಳ್ಳೇ ಹೇಮಾಮಾಲಿನಿ, ಶ್ರೀದೇವಿ ಥರಾ ಕಾಣೋ ಹಾಗೆ ಮಾಡಿದೀರಲ್ಲಾ ಸಾರ್! ನಿಮ್ಮ ಕೈಚಳಕ ಸುಪರ್ಬ್! ಕೆಲ ವರ್ಷಗಳ ಹಿಂದೆ 'ಕಾಣದ ಕ್ಯಾಮರಾ' ಅಂತ ಸೊಗಸಾದ ಲೇಖನ ಬರೆದಿದ್ರಲಾ ಕಾಮತ್ ಅನ್ನೋರು! ನೀವೇ ಅಂತ ಈಗ ಗೊತ್ತಾಯ್ತು ಬಿಡಿ! ನನಗೂ ಫೋಟೊಗ್ರಾಫಿ ಹಾಬಿ ಇದೆ ಸಾರ್! ಆದರೆ ಈ ಖಾತೆ ಸೇರ್ಕೊಂಡೆ ನೋಡಿ! ಬರೆ ಕುಡಿತ, ಹೊಡೆತ, ಕೊಲೆ, ಸುಲಿಗೆ ಕೇಸ್ ಹಿಂದೆ ಓಡಾಡಿ, ಹಾಬಿ ಹಿಂದೆ ಬಿತ್ತು!....ಆ ಪೋಲಿಯಿಂದಾದ್ರೂ ನಿಮ್ಮಂಥಾ ಸಜ್ಜನ–ಸಂಭಾವಿತರ ಪರಿಚಯ ಆಗುವಂತಾಯ್ತು!" ಎಂದು ಹೇಳಿ ಕಾಫಿ ತರಿಸಿ ಸತ್ಕರಿಸಿದರಂತೆ.

"ಇನ್ನು ಹಣ್ಣಿನವರು ಫೋಟೊ ತೆಗೆದ ದೂರು ಕೊಟ್ಟಾಗ ನಾನೇ ನಿಮ್ಮ ಮನೆಗೆ ಬರ್ತೀನಿ. ನೀವು ಶೂಟ್ ಮಾಡಿದ ಪಿಕ್ಚರ್ಸ್ ನೋಡಿ ಖುಷಿ ಪಡ್ತೀನಿ!" ಎಂದು ಕೈಕುಲುಕಿ ಬೀಳ್ಕೊಟ್ಟರು.

ಹೀಗಿದೆ ರಾಯರ ಈಚೆಗಿನ ಫೋಟೊಗ್ರಾಫಿ ತಾರೀಫು!. ■

# ಅಜ್ಞಾತರು

"ನನ್ನದು ಏನೂ ತಪ್ಪಿಲ್ಲ ಸಾರ್! ಎಲ್ಲರ ಇನ್ವಿಟೇಶನ್ ಕಾರ್ಡ್ ಸರಿಯಾಗಿ ನೋಡಿಯೇ ಒಳ್ಗೆ ಬಿಟ್ಟಿದೀನಿ!" ಅಂಗಲಾಚಿ ಬಿನ್ನವಿಸಿದ ರಂಗಮಂದಿರದ ಬಾಗಿಲ ಕಾವಲುಗಾರ.

"ಹಾಗಿದ್ರೆ ಈ ಯಾರೋ ಬೇವರ್ಸಿ ಸ್ಟೇಜ್ ಹಿಂದೆಹೋಗಿ ಫ್ಲ್ಯಾಶ್ ಹಾಕಿ ಫೋಟೊ ಹೇಗೆ ಹಿಡಿದ?.... ಬೊಗಳೋ!" ತನ್ನದೇನೂ ತಪ್ಪಿಲ್ಲ! ಎಂದು ಸಮರ್ಥಿಸಿಕೊಳ್ಳಲು ಹೊರಟ ದ್ವಾರಪಾಲಕನನ್ನು ತರಾಟೆಗೆ ತೆಗೆದುಕೊಂಡರು ಸ್ಟೇಜ್ ಮೇಲ್ವಿಚಾರಕರು.

"ಏನೋ ಸಾರ್! ಎರಡೇ ನಿಮಿಷ, ಟಾಯ್ಲೆಟ್‌ಗೆ ಹೋಗಿ ಬರೋಣಾಂತ ಹೋಗಿದ್ದೆ. ಆಗೇನಾದರೂ ಗ್ರೀನ್ ರೂಂ ಕಡೆಗೆ ನುಸುಳಿ ಹೋಗಿರಬೇಕು!" ಎಂದು ಮತ್ತೆ ದ್ವಾರಪಾಲಕ ಸಮರ್ಥಿಸಿಕೊಳ್ಳಲು ಯತ್ನಿಸಿದ.

"ಗೌಡ್ರೇ, ವಾಚ್‌ಮನ್ ಹೇಳೋದ್ರಲ್ಲಿ ಸತ್ಯಾಂಶ ಇರಬೇಕು. ಹೋದವಾರ ಯಕ್ಷಗಾನ ಪಾರ್ಟಿ ಬಂದಿತ್ತು ನೋಡಿ, ಅವರಿಗೆ ಸಪ್ಲೈ ಮಾಡಿದ ತಿಂಡೀಲಿ ಹೆಚ್ಚಿನದನ್ನು ಹೊರಗಿನವರೇ ಬಂದು ತಿಂದ್ಕೊಂಡು ಹೋದ್ರಂತೆ! ಮತ್ತೆ ಮತ್ತೆ ಬಂದ ಒಬ್ಬನ್ನ ನಾನೇ ದಬ್ಬಿ ಹೊರಗೆ ಹಾಕಿದೀನಿ! ಈವಾಗ್ಲೂ ಇಡ್ಲಿ-ವಡಾ ಸ್ವಾಹಾ ಮಾಡ್ಲಿಕ್ಕೆ ಬಂದಿರಲು ಸಾಕು!" ಬಾಯ್ತುಂಬ ವಡಾ ತುಂಬಿಕೊಂಡೇ ವೇಷಧಾರಿಯೊಬ್ಬ ನುಡಿದ.

"ಅಯ್ಯೋ! ಕಳ್ಳತನ-ದರೋಡೆ ವಿಪರೀತ ಜಾಸ್ತಿ ಆಗ್ಹೋಯ್ತು! ಎರಡುವಾರದ ಹಿಂದೆ ನಮ್ಮ ಸುಕೋಮಲಾ 'ಆರಂಗೇಟ್ರಂ' ಇರ್ಲಿಲ್ವೆ? ಎಲ್ಲರೂ ಸಮಾರಂಭದಲ್ಲಿ ಮೈಮರೆತಾಗ ಒಬ್ಬಾತ ಬಂದು ಒಡವೆ-ಬಟ್ಟೆ, ಸ್ಯೂಟ್ಕೇಸ್‌ನೇ ಮಾಯಮಾಡಲಿಲ್ವೆ? ಪೋಲಿಸ್ ದೂರು ಪ್ರಯೋಜನವಾಗಲಿಲ್ಲ. ಇಂದಿಗೂ ಆರೋಪಿ ಪತ್ತೆ ಆಗಲಿಲ್ಲ!" ದೊಡ್ಡ ನಿಟ್ಟುಸಿರು ಬಿಟ್ಟರು ನಾಟ್ಯಾಚಾರ್ಯ ಪಾವನ ಮೂರ್ತಿಗಳು.

"ಶಿವಶಿವಾ! ನಮ್ಮ ಅನುಭವ ಹೇಳ್ಕೊಂಡ್ರ, ನಿಮ್ದು ಏನೇನೂ ಅಲ್ಲ! 'ರಂಗ ತೋರಣ'ದ ರಜತ ಮಹೋತ್ಸವ ಇತ್ತಲ್ರೀ? ಹೋದ ತಿಂಗ್ಳಾ? ರಂಗಾಸಕ್ತರು, ರಂಗ ಪ್ರೇಮಿಗಳು ಎಲ್ಲರಿಂದ ಕೊಡುಗೆ, ದಾನ, ದೇಣಿಗೆ ಸಂಗ್ರಹಿಸಿ ಎಂಥ ಭಲೋ ಬನಾರಸಿ ಸೀರಿ, ಜರತಾರಿ ರುಮಾಲ, ಧೋತ್ರಾ, ಕಿರೀಟ ಖರೀದಿ ಮಾಡಿ ತಂದು ಇಟಗೊಂಡಿದ್ವಿ ಏನ್ರಿ! ನಮ್ಮ ಕಣ್ಣಿದ್ರಿಗೇ ಐದ ಸೂಟಕೇಸ್ ಮಟಾಮಾಯ ಆದ್ವಲ್ರೀ? ಈ ಲುಕ್ಸಾನು ಯಾರು ಭರಪ್ಯಾ ಮಾಡ್ತಾರ ಹೇಳ್ರಿ? ಒಂದ 'ಸೀನರಿ' ಅಂತೂ ಕಿರೀಟ ಇಲ್ದನಾ ಕೃಷ್ಣ ಬಂದು ಪ್ರತ್ಯಕ್ಷ ಆಗಬೇಕಾತು! ಪುಣ್ಯಕ್ಕ ಥೇಟರ್ ಮುಕ್ಕಾಲ ಖಾಲಿನಾ ಇತ್ತಂತ ನಮ್ಮ ಮಾನ ಉಳೀತು! ಇಲ್ಲಾಕ್ರ ಕಲ್ಲು ಬೀಳತಿದ್ವು ಕಲ್ಲು!" ಇಟಗಿಯ ಈರಣ್ಣ ಗದ್ಗದಿತನಾಗಿ ಹೇಳಿದ.

"ಅದೇನು ಕೇಳ್ತಿರಾ? ಬೆಂಗ್ಳೂರ ಸಿಟೀಲಿ ಇಂಥಾದ್ದು ಡೇಲಿ ಒಂದಿಲ್ಲೊಂದು ರೀತಿಲಿ ನಡೀತಾನೆ ಇದೆ! ಭಾರಿ ಭಾರಿ ಹೆಸರಿನ ಕಲ್ಯಾಣಮಂಟಪಗಳ ಕತೆ ಕೇಳಿಲ್ವೆ? ಎಲ್ಲೆಲ್ಲಿ ಈ ಕಾಣದ ಕದೀಮರ ಸೆಂಟರ್‌ಗಳು! ಫಸ್ಟ್‌ಕ್ಲಾಸ್ ಬಟ್ಟೆ ಬರೆ ಹಾಕ್ಕೊಂಡು ಇಂಗ್ಲಿಷ್ ಠೀವಿಯಿಂದ ಮಾತಾಡ್ತ ಬಂದರಂದ್ರೆ ನೀವು ಯಾರು? ಎಂದು ವಿಚಾರಿಸಿಕೊಳ್ಳೊ ಛಾತಿ

ವರನ ಪಕ್ಷದವರಿಗೂ ಇರಲ್ಲ! ವಧು ಪಾರ್ಟಿಯವರಿಗೂ ಇರಲ್ಲ! ಇವರೋ ಎಲ್ಲರನ್ನೂ ಚಿರಪರಿಚಿತರಂತೆ ಮಾತಾಡಸ್ತಾ, ಮಾತಾಡಸ್ತಾ, ನೇರ ಒಳನುಗ್ಗಿ ಬೆಳ್ಳಿ ಬಂಗಾರ, ದುಡ್ಡುಕಾಸು, ಗೊತ್ತಾಗದ ಹಾಗೆ ದೋಚ್ಕೊಂಡು ಬಿಡ್ತಾರಂತೆ!" ಪೋಲಿಸ್ ವಾರ್ತೆ ತಪ್ಪದೇ ಓದುವ ವ್ಯಕ್ತಿ ವಿವರಣೆ ನೀಡಿದ.

"ಬಹುಶಃ ಈತ ಆರ್ಟಿಸ್ಟ್ ಹೆಂಗಸರು ಬಟ್ಟೆ-ಬರೆ ಬದಲಾಯಿಸುವಾಗ ಅವರ ಫೋಟೊ ತೆಗಿಲಿಕ್ಕೆ ಬಂದಿರಬೇಕು, ಸಾರ್! ದಿಲ್ಲಿ, ಜೈಪುರ್, ಅಜಮೇರ್‌ಗಳಲ್ಲಿ ಇಂಥ ಚಿತ್ರ ಹಾಗೂ ನೆಗೆಟಿವ್, ಅಫರಾ-ತಫರ್ ಮಾಡಿ ಬಳಸಿ, ಇಂಥ ಲೇಡಿಸ್ ಜನರ ಆಪ್ತೇಷ್ಟರನ್ನ ಹೆದರಿಸಿ, ಬೆದರಿಸಿ, ಬ್ಲ್ಯಾಕ್ ಮೇಲ್ ಮಾಡಿ ಲಕ್ಷಾಂತರ ರೂಪಾಯಿ ಕಿತ್ಕೋತಾರಂತೆ!" ಈ ನಗರಗಳೆಲ್ಲ ಭಾರತದಲ್ಲೇ ಇವೆ! ಎಂದು ಖಚಿತವಾಗಿ ಅರಿತವನು ಉಸುರಿದ.

ನೆರೆದವರೆಲ್ಲ ಸ್ವಾನುಭವಗಳನ್ನು ಹಾಗೂ ಕಲ್ಪನಾ ಸನ್ನಿವೇಶಗಳನ್ನು, ವಾಚಿತ ಚಿತ್ರಗಳನ್ನು ರಂಗುರಂಗಾಗಿ ವಿವರಿಸಲಾರಂಭಿಸಿದರು. ಇದರಿಂದ ಸುತ್ತ ಜನ ಸೇರಿದರು. ರಂಗದ ಹಿಂದೆ ಯಾವುದೋ ಹಾಸ್ಯ-ಗೋಷ್ಠಿ ನಡೆದಿರಬೇಕು! ಎಂದುಕೊಂಡು. ಭರತನಾಟ್ಯದ ಪ್ರದರ್ಶನ ನೋಡಬಂದ ಪ್ರೇಕ್ಷಕರಲ್ಲಿ ಅನೇಕರು, ಹಿಂದಿನಿಂದ ಬಂದು ಒಳಗೆ ನುಗ್ಗಲಾರಂಭಿಸಿದರು. ಇದನ್ನು ತಪ್ಪಿಸಲು ಆಪಾದಿತನನ್ನು ರಂಗದಾಚೆಯ ಅಂತರಂಗ ಸಭಾಮಂಟಪಕ್ಕೆ ರಂಗಮಂದಿರದ ಸಿಬ್ಬಂದಿ ಕರೆದೊಯ್ದಿತು.

ಇತರರೆಲ್ಲರ ಅವಿಶ್ರಾಂತ ವಟಗುಟ್ಟುವಿಕೆಯನ್ನು ಆಪಾದಿತ ವ್ಯಕ್ತಿ, ಅತ್ಯಂತ ಕುತೂಹಲದಿಂದ ಕೇಳುತ್ತಿದ್ದರೂ ಪಿಟ್ಟೆಂದು ಬಾಯಿಬಿಟ್ಟಿರಲಿಲ್ಲ. ಹೀಗಾಗಿ ಕೆಲ ಸಮಯದ ಬಳಿಕ ಮಂದಿರದ ಸಿಬ್ಬಂದಿಗೇ ಮುಜುಗರವಾಯ್ತು! ಸಭ್ಯನಂತೆ ಕಾಣುತ್ತಿದ್ದುದರಿಂದ ಒರಟು ಭಾಷೆ ಉಪಯೋಗಿಸಲೂ ಮನಸ್ಸಾಗಲಿಲ್ಲ. ಅಂತೆಯೇ ಅವರಲ್ಲಿಯೇ ಮೇಲ್ದರ್ಜೆಯ ವ್ಯಕ್ತಿಯೋರ್ವ, ಧೈರ್ಯಮಾಡಿಕೊಂಡು ಕೇಳಿದ. "ಈಗಲಾದರೂ ಹೇಳಯ್ಯ... ರಂಗಮಂದಿರದಲ್ಲಿ ಅದೂ ಗ್ರೀನ್‌ರೂಂನಲ್ಲಿ ಪ್ರವೇಶಿಸಲಿಕ್ಕೆ ನಿನಗೆ ಹೇಗೆ ಸಾಧ್ಯವಾಯ್ತು?" ಈಗಲೂ ಮಾತನಾಡದೇ ಆ ಛಾಯಾಚಿತ್ರಕಾರನು, ಹುಟ್ಟಾಮೂಕನಂತೆ ಜೊತೆಯಲ್ಲಿ ತಂದಿದ್ದ ಕ್ಯಾಮರಾ ಕೈಚೀಲದಿಂದ ಆಮಂತ್ರಣ ಪತ್ರಿಕೆಯನ್ನು ತೆಗೆದು ಅವನ ಕೈಗಿತ್ತ. ಬಳಿಕ ಬಯಲು ಮಂದಿರದ ಮೇಲ್ಗಡೆ ಗಗನ ವಿಹಾರಿಯಾಗಿದ್ದ ಹದ್ದುಗಳ ಹಾರಾಟ ನೋಡುವದರಲ್ಲಿ ಮೈಮರೆತ.

ಆಮಂತ್ರಣ ಪತ್ರಿಕೆಯ ಮೇಲಿನ ಅಂಚೆ ವಿಳಾಸವನ್ನು ಓದಿದ ಅಧಿಕಾರಿ ಇನ್ನಷ್ಟು ಕೆರಳಿದ. "ಏನಯ್ಯಾ, ನೀನು ಮಹಾಧೂರ್ತನೆಂದು ತೋರುತ್ತದೆ! ಯಾರಿಗೋ ಪೋಸ್ಟ್ ಮಾಡಿದ ಆಮಂತ್ರಣ ಪತ್ರಿಕೆಯನ್ನು ಕಸದತೊಟ್ಟಿಯಿಂದ.....ಬ್ಬಬ್ಬ ಅಲ್ಲಲ್ಲ! ಇನ್ನೆಲ್ಲಿಂದಲೋ ಹಾರಿಸಿಕೊಂಡು ಬಂದಿದಿಯಾ? ಇಲ್ಲದಿದ್ದರೆ ಡಾ। ಕೆ.ಎಲ್. ಕಾಮತ್, M.Sc (Ph.D.) ನ್ಯೂಯಾರ್ಕ್ ವಿಶ್ವವಿದ್ಯಾಲಯ ಎಂದು ಹೆಸರಿದ್ದವರಿಗೆ ಈ ಆಮಂತ್ರಣ ಕಳಿಸಲಾಗಿತ್ತು! ಅವರು ನೀನೇ ಎಂದು ಸಾಧಿಸಲು ಹೊರಟಿದ್ದೀಯಾ? ಇಂಥ ವಿದ್ವಾಂಸ ವ್ಯಕ್ತಿ ಯಾರು ಅಂತ ನಾನಾಗಲಿ, ಇಲ್ಲಿರುವ ಯಾರೇ ಆಗಲಿ ನೋಡಿಯೇ ಇಲ್ಲ! ಹೋಗಲಿ ಅವರ ಫೋಟೊ ಆಗಲಿ ಅವರ ಹೆಸರಾಗಲಿ ಯಾವುದೇ ಪತ್ರಿಕೆಯಲ್ಲಿ ಪ್ರಕಟ ಆದಂತೆ ಇಲ್ಲ! ನಿನಗ್ಯಾಕೆ ಈ ಹುಚ್ಚು ಧೈರ್ಯ ಬಂದಿತು? ಈಗಲಾದರೂ ಬಾಯಿ ಬಿಡಬಾರದೇ?" ಎಂದು ತರಾಟೆಗೆ ತೆಗೆದುಕೊಂಡ.

"ಇಂದಿನ ಪೋಲಿಗಳ ವಿಶ್ವರೂಪದರ್ಶನ ಹೇಳಿ ತೀರುವಂತಿಲ್ಲ! ಕಲ್ಪಿಸಿಕೊಳ್ಳಲೂ

ಸಾಧ್ಯವಿಲ್ಲ. ಕೆಲವರ್ಷ ಹಿಂದಿನ ಕತೆ ಕೇಳಿ. ಮುಂಬೈ ಮಾಟುಂಗಾದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕನ್ನಡಿಗರು ಇದ್ದಾರಷ್ಟೆ? ಕರ್ನಾಟಕ ಸಂಘದ ದೊಡ್ಡ ಕಟ್ಟಡ ಹಾಗೂ ರಂಗಮಂದಿರ ಇರುವದೂ ಅಲ್ಲಿಯೇ! ಹುಟ್ಟಾ ಕನ್ನಡಿಗರು ಅಲ್ಲಿ ಹೋಗಿ ಯಶಸ್ವಿಗಳಾಗಿದ್ದಂತೆ, ಆಗರ್ಭಶ್ರೀಮಂತರೂ ಇದ್ದಾರೆ. ಇದನ್ನರಿತ ಒಬ್ಬ ಅಜ್ಞಾತ ಪೋಲಿ ಮುಂಬೈಗೆ ಅಪರಿಚಿತರಾಗಿಯೇ ಉಳಿದಿದ್ದ ಹೆಸರಾಂತ ಕಾದಂಬರಿಕಾರ ತಾನೇ! ಎಂದು ಅಲ್ಲಿಯ ವಲಯಗಳಲ್ಲೆಲ್ಲ ನಂಬಿಕೆ ಹುಟ್ಟಿಸಿ, ಯಥೇಷ್ಟ ಆತಿಥ್ಯ ಪಡೆದು, ಜೊತೆಗೆ ತನ್ನ ಅಪ್ರಕಟಿತವಾಗಿಯೇ ಉಳಿದ ಕೃತಿಗಳನ್ನೆಲ್ಲ ಬೆಳಕಿಗೆ ತರಲು ನೆರವು ಕೋರಿ, ಸಹಸ್ರಾರು ರೂಪಾಯಿಗಳನ್ನು ಪಡೆದು ಕಣ್ಮರೆಯಾಗಿ ಹೋದ! ಲೇಖಕರು, ಛಾಯಾಚಿತ್ರಕಾರರು, ಸುಸಂಸ್ಕೃತರೇ? ಎಂದು ಸಂದೇಹ ಪಡುವ ಪರಿಸ್ಥಿತಿ ನಿರ್ಮಾಣವಾಗಿದೆ!" ಮುಂಬೈ ಕನ್ನಡ ಪ್ರಪಂಚ ಬಲ್ಲ ಅನುಭವಿ ಪತ್ರಿಕೋದ್ಯಮಿ ಒಬ್ಬರು ನುಡಿದರು.

"ಸಾರ್, ಈತ ಬಾಯಿ ಬಿಡುತ್ತಿಲ್ಲ. ಆದರೆ ಎಲ್ಲ ಬಲ್ಲವರಂತೆ ನಿರ್ಭೀತಿಯಿಂದಲೇ ನೋಡುತ್ತಿದ್ದಾರೆ. Gentlemanರನ್ನ ಕೆಣಕಿದೀವಿ ಅಂತ ಆಪಾದನೆ ಬಂದೀತು! ಯಾವ ಹುತ್ತದಲ್ಲಿ ಯಾವ ಹಾವು ಇದೆಯೋ! ಸುಮ್ಮನೇ ಪೋಲಿಸಿನವರಿಗೆ ತಿಳಿಸಿ ಬಿಡೋಣ. ರಂಗಮಂದಿರಕ್ಕೆ ಕೆಟ್ಟ ಹೆಸರು ಬೇಡ!" ಆಡಳಿತಾಧಿಕಾರಿ ಮೆಲುದನಿಯಲ್ಲಿ ಸಲಹೆ ನೀಡಿದ.

"ಆದರೆ ಅದಕ್ಕೂ ಮೊದಲು ಡೈರೆಕ್ಟರ್ ಸಾಹೇಬರಿಗೆ ಒಂದು ಮಾತು ಹೇಳಿಬಿಡೋದು ವಾಸಿ! ತಮ್ಮ ಗಮನಕ್ಕೆ ಏಕೆ ತರಲಿಲ್ಲವೆಂದು ಆಮೇಲೆ ಅವರ ಆಟಾಟೋಪ ಯಾರು ಎದುರಿಸಬೇಕು? ವರಿಷ್ಠರ ನಿಷ್ಠುರತೆ ಆತ್ಮೀಯವಿದ್ದ ಅನುಭವಿ ಉದ್ಗರಿಸಿದ.

ಎಲ್ಲರಿಗೂ ಈ ಸಲಹೆ ಸಮರ್ಪಕವೆಂದು ತೋರಿತು. ಆಪಾದಿತನು ತಪ್ಪಿಸಿಕೊಳ್ಳದಂತೆ ಕಣ್ಣಿಟ್ಟು, ಪ್ರೇಕ್ಷಕರ ಮುಂದಿನ ಸಾಲಿನಲ್ಲಿ ಮುಖ್ಯ ಅತಿಥಿ ಹಾಗೂ ವಿಶೇಷ ಆಹ್ವಾನಿತರೊಡನೆ ಕುಳಿತಿದ್ದ ನಿರ್ದೇಶಕರಿಗೆ ಸಂದೇಶ ತಲುಪಿಸುವದೆಂದು ನಿರ್ಧಾರವಾಯಿತು. ತುಂಬ ಹೆದರುತ್ತ ನಿಂತಿದ್ದ ಕಾವಲುಗಾರನನ್ನೇ ಸಂದೇಶ ವಾಹಕನೆಂದು ಕಳುಹಿಸಲು ಸಾಧ್ಯವಾಗದೇ ಕೊನೆಗೆ ಚೀಟಿಯನ್ನೆ ಸಭಾಗೃಹದಲ್ಲಿ ಕಳಿಸಲಾಯಿತು.

ತಬ್ಬಿಬ್ಬಾಗಿ, ಅವಸರವಸರವಾಗಿ ಬಂದ ನಿರ್ದೇಶಕರು ಬಂದು ವಿವರಗಳನ್ನು ಕೇಳಿದರು. ವ್ಯಕ್ತಿಯನ್ನು ನೋಡಿದರು. ಆಮಂತ್ರಣ ಪತ್ರಿಕೆಯನ್ನು ದಿಟ್ಟಿಸಿದರು. "ಅರರೇ! ಇವರ ಪತ್ನಿ ಶ್ರೀಮತಿ ಜ್ಯೋತ್ಸ್ನಾ ಕಾಮತರು ಆಡಿಟೋರಿಯಂನಲ್ಲೇ ಕುಳಿತಿದ್ದಾರಲ್ಲ! ಈಗಷ್ಟೇ ಅವರನ್ನು ನೋಡಿದೀನಿ! ನೋಡಪ್ಪಾ, ಅಲ್ಲಿ ಮೂರನೇ ಸಾಲಿನಲ್ಲಿ ಚಶ್ಮಾಧರಿಸಿ, ನಟ್ಟ ಕಣ್ಣಿನಿಂದ ಕಾರ್ಯಕ್ರಮ ನೋಡ್ತಾ ಕೂತಿದ್ದಾರಲ್ಲ ಧಡೂತಿ ಮಹಿಳೆ ಅವರನ್ನ ಕರ್‍ಕೊಂಡ ಬಾ!" ಎಂದು ಕಾವಲುಗಾರನನ್ನು ಅಟ್ಟಿದರು. "ಅವರು ಬಂದು ಇವರನ್ನು ಗುರುತಿಸಿದರೆ–ಆಮಂತ್ರಣ ಪತ್ರಿಕೆ ಇವರಿಗೇ ಕಳಿಸಿದ್ದು ನಿಜವಾಗಿದ್ದರೆ, Problem Solve ಆದಂತೆ!" ಎಂದರು.

ಆಪಾದಿತನ ಪತ್ನಿ, ಕೊರಗರ ಕುಣಿತ ನೋಡುತ್ತ ಮೈಮರೆತು ಕುಳಿತಿದ್ದಳು. ಕಾವಲುಗಾರನ ಹೇಳಿಕೆ ಅರ್ಥವಾಗದೇ, ತನ್ನ ಪತಿಯಿಂದ ಏನೋ ಅನಾಹುತ ನಡೆದು ಹೋಗಿದೆ! ಎಂದು ತೇಕುತ್ತ ಧಾವಿಸಿ ರಂಗದ ಹಿಂಬದಿಯಲ್ಲಿ ಸೇರಿದ ಜನರ ಗುಂಪಿನತ್ತ

ಬಂದಳು. ಲಗುಬಗೆಯಿಂದ ಜನ ದಾರಿ ಬಿಟ್ಟು ನಿಂತಾಗ, ನಿರ್ದೇಶಕರತ್ತ ಪರಿಚಯದ ನಗೆ ಬೀರಿದಳು. ಈಗ ಆಪಾದಿತ ಕಣ್ಣಿಗೆ ಬಿದ್ದ! ಡೈರೆಕ್ಟರರಿಗೆ "ಇವರೇ ನನ್ನ ಪತಿ ಡಾ। ಕಾಮತರು. ನೀವು ಹಿಂದೊಮ್ಮೆ 'ಕಾಣದ ಕ್ಯಾಮರಾ', 'ಕಾಗೆಯ ಕಾಯಕ' ಲೇಖಗಳನ್ನು ಓದಿ ಬಹುವಾಗಿ ಮೆಚ್ಚಿಕೊಂಡಿದ್ದೀರಲ್ವೆ? ಇವರೇ ಬರೆದದ್ದು! ಇವರ ಬರವಣಿಗೆಯ ಪರಿಚಯ ಸಾಕಷ್ಟು ಜನರಿಗೆ ಇದೆ. ಆದರೆ ಎಷ್ಟೇ ಒತ್ತಾಯ ಮಾಡಿದರೂ, ಸಾಹಿತ್ಯ, ಕಲಾಸಭೆ, ಸಮ್ಮೇಳನಗಳಿಗೆ ಬರಲು ಒಪ್ಪಾತನೆ ಇರಲಿಲ್ಲ! ಹೀಗಾಗಿ ಇವರು ಯಾರು ಅಂತ ಜನರಿಗೆ ಗೊತ್ತೇ ಇಲ್ಲ. ಆದ್ದರಿಂದ ಇವತ್ತು ಇಂಥ ಅಚಾತುರ್ಯ ಎದುರಿಸೋ ಸಂದರ್ಭ ಬಂತು! ಈಗಲೂ ಅವರಿಗೆ ಇಲ್ಲಿ ಬರೋ ಮನಸ್ಸು ಇರಲೇ ಇಲ್ಲ! ಈಗೆರಡು ವರ್ಷಗಳಿಂದ ಕರ್ನಾಟಕದ ಜಾನಪದ ಕಲೆಗಳ ಬಗ್ಗೆ ಅವರಿಗೆ ಮೀರಿದ ಆಸಕ್ತಿ ಹುಟ್ಟಿದೆ. ಎಲ್ಲೇ ಕಲಾ ಪ್ರದರ್ಶನಗಳಿದ್ದರೆ ತನಗೆ ಬಂದ ಆಮಂತ್ರಣ ಪತ್ರಿಕೆ ಹಿಡ್ಕೊಂಡು ಹೊರಟೇ ಬಿಡ್ತಾರೆ. ಕಲಾವಿದರಿಗೆ, ಸಂಘಟಕರಿಗೆ ಆಕ್ಷೇಪ ಇಲ್ಲಾಂದರೆ ವರ್ಣಚಿತ್ರಗಳನ್ನು ಕ್ಲಿಕ್ಕಿಸುತ್ತಾರೆ.... ಭರದಿಂದ ಕಣ್ಮರೆಯಾಗುತ್ತಿರುವ ನಮ್ಮ ಜಾನಪದ ಕಲಾ ಪ್ರಕಾರಗಳನ್ನೆಲ್ಲ ಮುಂದಿನ ಪೀಳಿಗೆಗಾಗಿ ವರ್ಣಚಿತ್ರ ರೂಪದಲ್ಲಿ ಕಾಯ್ದು ಇರಿಸೋಣ! ಅಂತ ಏಕಮೇವ ಉದ್ದೇಶ ಹೊಂದಿದ್ದಾರೆ!".... ನನಗೆ ರಂಗದ ಹಿಂದಿನ ಚಟುವಟಿಕೆಗಳಲ್ಲಿ ಆಸಕ್ತಿ ಇಲ್ಲವಾದ್ದರಿಂದ ಅವರನ್ನು ಎಳೆದುಕೊಂಡು ಬಂದರೂ ಕ್ಯಾಮರಾ ಕ್ಲಿಕ್ಕಿಸಲು ಅವರ ಪಾಡಿಗೆ ಅವರನ್ನ ಬಿಟ್ಟು ನಾನು ಬಂದು ಆಡಿಯನ್ಸ್ ಜೊತೆ ಕುಳಿತೆ" ಎಂದು ಹೇಳಿದಾಗ ನಿರ್ದೇಶಕರ ಕಣ್ಣಂಚಿನಲ್ಲಿ ನೀರು ಮಿನುಗಿತ್ತು. ನೆರೆದವರೆಲ್ಲರ ಮುಖದಲ್ಲಿ ಅಪರಾಧಿ ಭಾವ ಸ್ಪಷ್ಟವಾಗಿತ್ತು.

ನಡೆದು ಹೋದ ಅಚಾತುರ್ಯಕ್ಕೆ ಕ್ಷಮೆಕೋರಿ, ಆಪಾದಿತ ಅತಿಥಿ ಹಾಗೂ ಆತನ ಪತ್ನಿಯನ್ನು ನಿರ್ದೇಶಕರು ತಮ್ಮ ರೂಮಿಗೆ ಕರೆದೊಯ್ದು ಅಲ್ಲಿದ್ದವರಿಗೆ ಪರಿಚಯಿಸಿದರು. ಅಲ್ಲಿ ಕಾದಿದ್ದ ತರುಣ ಸಂಶೋಧಕರೊಬ್ಬರು ದಿಗ್ಗನೆ ಎದ್ದುನಿಂತು, "ಏನ್ಸಾರ್ ನೀವಿಲ್ಲಿ? ನಿಮ್ಮ ಪ್ರವಾಸಕಥನ ಪಠ್ಯ ನೂರಾರು ಮಕ್ಕಳಿಗೆ ಕಲಿಸಿದಿನಿ! ನಿಮ್ಮನ್ನು ಭೇಟಿ ಮಾಡಬೇಕೆಂದು ಎಷ್ಟು ವರ್ಷ ಕಾದರೂ, ನೀವು ಎಲ್ಲಿರ್ತೀರಿ? ಏನು ಮಾಡ್ತಾ ಇದ್ದೀರಿ! ಅನ್ನೋ ಪತ್ತೆನೇ ಸಿಗಲಿಲ್ಲ! ಈಗ ಅನಾಯಾಸ ಭೇಟಿ ಆದ್ರಿ!" ಎಂದು ಬಗ್ಗಿ ನಮಸ್ಕರಿಸಲೆತ್ನಿಸಿದವನನ್ನು ಆಪಾದಿತರು ತಡೆದರು. ಇನ್ನೊಬ್ಬ ವಿದ್ವಾಂಸರು, "ನಿಮ್ಮ 'ಕಾವಿಕಲೆ' ಸಂಶೋಧನೆ ನಿಜಕ್ಕೂ ಅಮೋಘವಾಗಿದೆ! ಇಂದು ಪೂರ್ತಿ ಕಣ್ಮರೆಯಾಗಿ ಹೋದ ಕಲೆಯನ್ನು ಪುಸ್ತಕದಲ್ಲಿ ಕಾಯ್ದು ಇಟ್ಟಿದೀರಿ!" ಎಂದು ಮೀರಿದ ಅಭಿಮಾನದಿಂದ ನುಡಿದರು. ಕಾಫಿ ಬಂದಿತು. ಸಂಕೋಚದಿಂದ ಕುಳಿತಿದ್ದ ಕಾಮತರಿಗೆ ಸಂಶೋಧಕ ವಿದ್ವಾಂಸರ ನುಡಿಗಳು ಇನ್ನಷ್ಟು ಮುದುಡುವಂತೆ ಮಾಡಿದವು. ಪತ್ನಿಗೆ ಕೊಂಕಣಿಯಲ್ಲಿ ತಮ್ಮ ಅನಿಸಿಕೆಗಳನ್ನು ಅರುಹಿದರು. "ಡಾ। ಕಾಮತರ ಅಂಬೋಣ ಏನು?" ಎಂದು ನಿರ್ದೇಶಕರು ತಿಳಿದುಕೊಳ್ಳಲು ಉತ್ಸುಕರಾದರು. "ನನ್ನನ್ನು ನೀನು ಗುರುತಿಸಲೇಬಾರದಿತ್ತು! ಆಗ ಪೋಲಿಸ್ ಠಾಣೆಗೆ ಕರೆದೊಯ್ಯುತ್ತಿದ್ದರು. ಅಲ್ಲಿ ಭಾರೀ ಮೋಸಗಾರನೆಂದು ನನ್ನ ಹೆಸರನ್ನು ಪಾಟಿಯ ಮೇಲೆ ಬರೆದು, ನನ್ನ ಕೈಯಲ್ಲಿಟ್ಟು ಫೋಟೊ ತೆಗೆಸಿ ಪತ್ರಿಕೆಗಳಲ್ಲಿ ಅಚ್ಚು ಹಾಕಿಸುತ್ತಿದ್ದರೋ ಏನೋ! ಸಾರ್ವಜನಿಕ ಸ್ಥಳಗಳಲ್ಲಿ ಪ್ರದರ್ಶಿಸುತ್ತಿದ್ದರು, ನನ್ನ ಫೋಟೋದ ಎಂಥ ಅಪೂರ್ವ ಅವಕಾಶ ತಪ್ಪಿಹೋಯಿತು! ಎನ್ನುತ್ತಿದ್ದಾರೆ" ಎಂದು ಹೇಳಿದಾಗ ನೆರೆದವರೆಲ್ಲ ಗೊಳ್ ಎಂದು ನಕ್ಕುಬಿಟ್ಟರು. ■

# ರಾಯರ ವಾಕ್ ವೈಖರಿ

"ಮ್ಯಾಡಂ, ನೀವೊಂದು ಕಾರು ಕೊಳ್ಳಬೇಕು!" ಆಫೀಸು ಮುಚ್ಚಿ, ಸಕಾಲಕ್ಕೆ ಎಂದೂ ಬಾರದ ಬಸ್ಸಿಗೆ ಕಾಯುತ್ತ ನಿಂತಾಗ, ಕಾರಿನಲ್ಲಿ ಹೊರಟ ಸಹೋದ್ಯೋಗಿಯೊಬ್ಬ, ವಾಹನ ನಿಲ್ಲಿಸಿ, ಕನಿಕರದಿಂದ ನುಡಿದ. ಸ್ವಲ್ಪ ತಡೆದು, "ಕಾರು ಕೊಳ್ಳುವದಿದ್ದರೆ ನನಗೇ ಹೇಳಿ! ಫಸ್ಟ್‌ಕ್ಲಾಸ್, ಸೆಕೆಂಡ್ ಹ್ಯಾಂಡ್ ಫಿಯಾಟ್ ಕಾರನ್ನು ತೀರ ಕಡಿಮೆ ಬೆಲೆಗೆ ನಾಳೆಯೇ ನಿಮ್ಮ ಮನೆಯ ಎದುರು ತಂದು ನಿಲ್ಲಿಸುತ್ತೇನೆ!" ಎಂದು ಕಾರಿನ ಮಾರಾಟವನ್ನೇ ಕಾಯಕವನ್ನು ಮಾಡಿಕೊಂಡು, ಆಫೀಸ್ ಕೆಲಸವನ್ನು ಉಪವೃತ್ತಿಯಾಗಿಸಿದ ಸಹೋದ್ಯೋಗಿ ನುಡಿದ.

"ಬೇಡಪ್ಪ ಮಹಾರಾಯ್ರೇ! ಕಾರೂ ಬೇಡ, ವ್ಯಾನೂ ಬೇಡ ಡ್ರಾಯವ್ಹರ್, ಪೆಟ್ರೋಲ್, ಸರ್ವಿಸು, ಎಲ್ಲವೂ ಸಮಸ್ಯೆಗಳೇ! ಕಾರು ನನ್ನಂಥವಳಿಗಲ್ಲ. ಸಾಧ್ಯವಿದ್ದರೆ ನಡೆದೇ ಮನೆ ಸೇರುತ್ತಿದ್ದೆ" ನಾನೆಂದೆ.

"ಯಾವ ನಂಬರ್ ಬಸ್ ನಿಮ್ಮದು?" ಜೊತೆಗಿದ್ದಾತ ಕೇಳಿದ. "ಇಲ್ಲಿಂದ 93ಸಿ ಮಲ್ಲೇಶ್ವರಂ 8ನೇ ಕ್ರಾಸ್ ತನಕ. ಅಲ್ಲಿಂದ ಮುಂದೆ ಹನ್ನೊಂದನೆ ನಂಬರ್ ಇದ್ದೇ ಇದೆ!"

"11ನೇ ನಂಬರ್ ಬಸ್ ಆ ರೂಟ್‌ನಲ್ಲಿ ಎಲ್ಲಿದೆ ಮ್ಯಾಡಂ?" ದಿಙ್ಮೂಢನಾಗಿ ವಿಚಾರಿಸಿದ ಆ ಜೊತೆಗಾರ.

"ನಮ್ಮೆರಡು ಕಾಲುಗಳಿಗೇ ನಮ್ಮವರು 11ನೇ ನಂಬರ್ ಬಸ್ ಎನ್ನುತ್ತಾರೆ. ಅವರು ಯಾವಾಗಲೂ ಇದೇ ನಂಬರಿನ ಬಸ್ಸನ್ನೇ ಬಳಸುವುದು! ಈಗ ನಾನು ಇಷ್ಟು ಹೊತ್ತು ಬಸ್ಸಿಗೆ ಕಾಯುತ್ತ ನಿಂತದ್ದನ್ನು ಕಂಡರೆ, ಅದೇ ಹೊತ್ತಿನಲ್ಲಿ ನಡೆಯುತ್ತ ಹೋದರೆ, ಅರ್ಧ, ಮುಕ್ಕಾಲು ದಾರಿ ಮುಗಿಸುವಂತೆ ಆಗುತ್ತಿತ್ತು. ನಿನ್ನ ಆರೋಗ್ಯವೂ ಸುಧಾರಿಸುತ್ತಿತ್ತು! ಅನ್ನುತ್ತಿದ್ದರೋ ಏನೋ!" ಎಂದೆ. ನೆಲಕ್ಕೆ ಕಾಲನ್ನು ತಗಲಿಸದ ತರುಣರಿಬ್ಬರೂ ಕಕ್ಕಾವಿಕ್ಕಿಯಾಗಿ, ಅಪ್ಪಣೆ ಪಡೆದು ಕಾರು ಓಡಿಸಿದರು.

"ನಡೆಯುವವನ ಭಾಗ್ಯ ನಡೆಯುತ್ತಲೇ ಇರುತ್ತದೆ. ಚರನ್ ವೈ ಮಧುವಿಂದತಿ!" 'ಚಲಿಸುತ್ತಲೇ ಇರುವವನಿಗೆ ಸವಿಜೇನು ಲಭ್ಯ' ಎಂದು ವೇದ ಹೇಳುತ್ತದೆ. ವೇದ ಓದದಿದ್ದರೂ ಚಲನ ಕ್ರಿಯೆಯಲ್ಲಿ ರಾಯರಿಗೆ ಅಪರಿಮಿತ ವಿಶ್ವಾಸ. ಅವರೊಂದಿಗೆ ಚಲಿಸುತ್ತಿದ್ದರೆ, ಸವಿಜೇನು ಸಿಗದಿದ್ದರೂ, ಜೇನಿನಂತೆ ಸವಿಯಾದ ಮಾತುಗಳೊಂದಿಗೆ ಜೇನು ಕಡಿತದ ಅನುಭವ ಆಗೀಗ ಆಗುವುದೂ ಸುಳ್ಳಲ್ಲ! ಮನೆಯಲ್ಲಿದ್ದಾಗ ಸದಾ ಮೌನಿ. ಕೆಲಸದಲ್ಲಿದ್ದಾಗಂತೂ ಬಾಯಿಗೆ ಬೀಗಮುದ್ರೆಯೇ. ಆದರೆ ವಾಕ್ ಅಥವಾ ತಿರುಗಾಟಕ್ಕೆ ಹೊರಟಾಗ ಅವರ ವಾಗ್ ವೈಖರಿಯ ಸರಿಯಾದ ಪರಿಚಯವಾಗುತ್ತದೆ. ವಿವಿಧ ವಿಷಯಗಳ ಕುರಿತಾದ ಮಾಹಿತಿ, ಆಫೀಸು, ಗೃಹಕೃತ್ಯದ ಸಮಸ್ಯೆಗಳಿಗೆ ಪರಿಹಾರ, ಸಾಮಯಿಕ ವಿಚಾರಗಳ ವಿಶ್ಲೇಷಣೆಗಳು ಬೇಕಾಗಿದ್ದರೆ, ಎಲ್ಲ ಕೆಲಸಗಳನ್ನು ಬದಿಗಿಟ್ಟು ರಾಯರೊಂದಿಗೆ ತಿರುಗಾಡಲು ಹೋಗಬೇಕು. ಆದರೆ ಈ ವಿರಾಮ, ಇಬ್ಬರಿಗೂ

ಸಾಧ್ಯವಾಗದ್ದರಿಂದ ಬೆಳಿಗ್ಗೆ ಬಲುಬೇಗ ಏಳುವ ರೂಢಿ ಪ್ರಾರಂಭಿಸಿದೆವು. ಆಗಾಗ ಸಾಯಂಕಾಲದಲ್ಲೂ ಹೋಗುವುದುಂಟು.

ನಸುಕಿನ ಐದುಗಂಟೆಗೆ ನಾವು ಹೊರಡುವುದು ವಾಡಿಕೆ. ಅದಕ್ಕೂ ಸಾಕಷ್ಟು ಮೊದಲೇ ಎದ್ದ ರಾಯರು, ಪ್ರಾತರ್ವಿಧಿ, ಮುಖ ಮಾರ್ಜನ ಮುಗಿಸಿ, ಕಾಫಿ ಮಾಡಿ ಕುಡಿದು, ನನಗೂ ಕೊಟ್ಟು ಗೆಲುವಾಗಿರುತ್ತಾರೆ. ಬೆಂಗಳೂರು ಮಹಾನಗರ, ಕಣ್ತೆರೆಯಲೋ ಬೇಡವೋ ಎಂದು ಹಿಂಜರಿಯುತ್ತಲೇ ಮೈಮುರಿಯುತ್ತಿದ್ದಾಗ, ರಾಯರು ಬಟ್ಟೆಬರೆ ಶೂ ಧರಿಸಿ ರಸ್ತೆಗಿಳಿದೊಡನೆ ಬಿಸಿರಕ್ತದ ತರುಣರಾಗಿ ಮಾರ್ಪಡುತ್ತಾರೆ. ನಲವತ್ತು ವರ್ಷಗಳ ಹಿಂದಿನ ತಮ್ಮ ಎನ್.ಸಿ.ಸಿ. ದಿನಗಳು ನೆನಪಾಗುತ್ತಿರಬೇಕು. ಮಾರ್ಚಿಂಗ್ ಶುರುವಾಗುತ್ತದೆ. ಕಾಲು ನೆಲದಿಂದ ಅಷ್ಟೇ ಎತ್ತರಕ್ಕೆ ಎತ್ತುತ್ತಿರಬೇಕು. ಹಿಮ್ಮಡ ನೆಲಕ್ಕೆ ಹತ್ತಬಾರದು, ಪಾದವನ್ನು ಪೂರ್ತಿ ಒತ್ತಬಾರದು ವೇಗ ಹೆಚ್ಚು ಕಡಿಮೆ ಆಗಬಾರದು, ಎಂದೆಲ್ಲ ಶಿಸ್ತಿನಿಂದ ನಡೆಯುವ ಕ್ರಮವನ್ನು ನನಗೆ ಹೇಳಿಕೊಡುತ್ತಾರೆ. ಹಾಗೆ ಮುಂದುವರಿದಾಗ ರಸ್ತೆಯ ಬದಿಯ ಮರದಲ್ಲಿ ಬಾಗಿ ನಿಂತ ಟೊಂಗೆಯಲ್ಲಿ ಟಿಂವ್ ಟಿಂವ್ ಪಕ್ಷಿಯಾಗಲಿ, ಗುಟ್ರಗುಮ್ಮ (ಬಾರ್ಬೆಟ್) ಆಗಲಿ ಗೋಚರಿಸಿತೇ ಇವರ ನಡಿಗೆಗೆ ಬ್ರೇಕ್ ಬಿದ್ದಂತೆಯೇ! ಅವಕ್ಕೆ ತೊಂದರೆಯಾಗದಷ್ಟು ದೂರದಲ್ಲಿ ನಿಂತು, ಕಣ್ತುಂಬ ಅವುಗಳ ಚಲನವಲನಗಳನ್ನು ಗಮನಿಸುತ್ತಾರೆ. ಅವು ಹಾರಿಹೋದ ಬಳಿಕವೇ ವಾಕಿಂಗ್ ಮುಂದುವರೆಯುತ್ತದೆ.

ರಾಯರ ವಿರಾಮದ ವಾಕ್ ವೇಳೆಯೆಲ್ಲ ಕಾಗೆ, ಕೋಗಿಲೆ, ಹದ್ದುಗಳಿಗೆಲ್ಲ ಮೀಸಲಾಗಿರುತ್ತದೆಯಾದ್ದರಿಂದ ಅವುಗಳೊಂದಿಗೆ ನಾನು ಪೈಪೋಟಿ ಮಾಡಿ ಅವರ ಗಮನ ಸೆಳೆಯಬೇಕಾಗುತ್ತದೆ! ರಸ್ತೆಯಲ್ಲಿ ಸಾಗುತ್ತ ನಾಯಿ, ಕತ್ತೆ, ಬೆಕ್ಕು, ಹೆಗ್ಗಣ, ಕಣ್ಣುಕಪ್ಪಡಿ, ಹುಳ-ಹುಪ್ಪಟೆಗಳೆಲ್ಲ ಅವರ ಲಕ್ಷ್ಯ ಎಳೆಯದಿರುವದಿಲ್ಲ.

'ಇಮೆಲ್ಡಾ ಮಾರ್ಕೊಸ್ ಅಷ್ಟೊಂದು ಅಪಾರ ಹಣ ಸಂಗ್ರಹಿಸಿದಳಲ್ಲ! ಸಹಸ್ರ ಸಹಸ್ರ ಶೂಗಳೋ! ಅವುಗಳ ಸದುಪಯೋಗ ಹೇಗೆ ಮಾಡಿಕೊಳ್ಳುತ್ತಾಳೋ?' ವರ್ತಮಾನ ಪತ್ರದಲ್ಲಿ ನನಗೆ ಆಸಕ್ತಿ ಎನಿಸಿದ ವಿಷಯಕ್ಕೆ ಅವರ ಗಮನ ಸೆಳೆಯುತ್ತೇನೆ.

"ಅಕೋ! ಅಲ್ಲಿ ನೋಡು, ಆ ಗಿಣಿ ಪ್ರಿಯತಮೆಗೆ ಬೇವಿನ ಹಣ್ಣು ತಿನ್ನಿಸುತ್ತಿದೆ!" ಎಂದು ಮೈ ಮರೆತು ನೋಡುತ್ತ ನಿಲ್ಲುವರು. ಹೌದು, ನಿರ್ಜನ ಪ್ರದೇಶದಲ್ಲಿ ಬೇವಿನಮರ ತುಂಬ ಹಣ್ಣು ಬಿಟ್ಟಿದೆ. ಗಂಡು ಹಕ್ಕಿ ಒಳ್ಳೆ ಹಣ್ಣು ಹೆಕ್ಕಿ ಹೆಕ್ಕಿ ಪಕ್ಕದಲ್ಲಿದ್ದ ಪ್ರಿಯೆಯ ಕೊಕ್ಕಿನಲ್ಲಿ ಇಡುತ್ತದೆ. ತಕ್ಷಣ ಅದು ತ್ಯಜಿಸಿ ಬಿಡುತ್ತದೆ. ವಿಚಲಿತವಾಗದೇ ಗಂಡುಹಕ್ಕಿ ತನ್ನ ಕಾಯಕವನ್ನು ಮುಂದುವರಿಸುತ್ತದೆ. ಹೆಣ್ಣು ಪುನಃ ಬಿಸಾಕುತ್ತದೆ. ಮಾನವನ ಸಂಗ್ರಹ, ಹಕ್ಕಿಯ ಅಸಂಗ್ರಹದ ನೋಟಗಳ ಎರಡು ಧ್ರುವಗಳ ನಡುವೆ ನಮ್ಮ ನಡೆದಾಟ ಸಾಗಿರುತ್ತದೆ.

ಕಾದಂಬರಿಗಳನ್ನು ಓದದ ರಾಯರಿಗೆ ತ.ರಾ.ಸು. ಅವರ 4X4=0 ಶೀರ್ಷಿಕೆವುಳ್ಳ, ಸತ್ಯಕಾಮ ಜಾಬಾಲಿಯ ಕತೆಯನ್ನು ಆಧರಿಸಿದ ಕಾದಂಬರಿಯ ಸೊಗಸನ್ನು ಬಣ್ಣಿಸುತ್ತ ಹೊರಟಿದ್ದೇನೆ. ಕೇಂದ್ರ ವಿದ್ಯಾಸಂಸ್ಥೆಯ ಪಕ್ಕದಲ್ಲಿ ನಿಧಾನವಾಗಿ ನಡೆಯುತ್ತ ಕಿವಿಯನ್ನು ನನ್ನ ಮಾತಿಗೆ ತೆರೆದಿಟ್ಟು (ನಾನು ಹಾಗೆ ಭಾವಿಸುತ್ತೇನೆ!) ಪಕ್ಕದ ಬೇಲಿಯತ್ತ ನಿಡುಗಣ್ಣು ತೆಗೆದಿಟ್ಟು ಸಾಗಿದ್ದಾರೆ ರಾಯರು.

"ನೋಡು! ನೋಡು, ಕಣ್ತೆರೆದು ನೋಡು!" ಪಿಸುಧ್ವನಿಯಲ್ಲಿ ನುಡಿದು, ಬಟ್ಟುಮಾಡಿ ತೋರಿಸುತ್ತಾರೆ. ಬೇಲಿಯ ಲಾಂಟಾನದ ಹಸಿರು ಎಲೆಗಳ ಮರೆಯಲ್ಲಿ ದೊಡ್ಡ ಹಸಿರು ಹುಳವೊಂದು ಮೊಟ್ಟೆಯಿಡುತ್ತಲಿದೆ. ಅದರ ಪ್ರಸವ ಸಮಾರಂಭಕ್ಕೆ ನಿಸರ್ಗವೇ ಸಾಕ್ಷಿ.

ಮಂದಮಾರುತ ಸಾಂತ್ವನ ನೀಡುತ್ತಲಿದೆ. ಪಕ್ಷಿ ಕೂಜನದ ಸ್ವಾಗತಗೀತ ಪ್ರಾರಂಭವಾಗಿದೆ. ಆಗಷ್ಟೇ ಮೂಡುತ್ತಲಿರುವ ಸೂರ್ಯದೇವ, ಆಶೀರ್ವದಿಸುತ್ತಿದ್ದಾನೆ. ಆ ದಾರಿಯಲ್ಲಿ ನಸುಕಿನ ತಿರುಗಾಟಕ್ಕೆ ಹೋಗುವ ಆದೆಷ್ಟೋ ಜನ ಇದ್ದಾರೆ. ಅವರಾರೂ ಅದನ್ನು ಗಮನಿಸಲಿಲ್ಲ. ರಾಯರು ತನ್ಮಯತೆಯಿಂದ ಕೀಟ ಜನ್ಮದ ಪ್ರಸಂಗವನ್ನು ವೀಕ್ಷಿಸುತ್ತಿದ್ದಾರೆ. ಸತ್ಯಕಾಮನು ಸಂಪಾದಿಸಿದ ಬ್ರಹ್ಮಜ್ಞಾನದ ಕತೆಯನ್ನು ಸುಲಭೀಕರಿಸಿ ರಾಯರಿಗೆ ನಿವೇದಿಸಬೇಕೆಂದಿದ್ದ ಕತೆ ಅಲ್ಲಿಗೆ ಉಳಿಯಿತು. ಕೀಟಜ್ಞಾನದ ಪ್ರಾಥಮಿಕ ಪಾಠ ನನಗೆ ಪ್ರಾರಂಭವಾಯಿತು. ಆ ಕೀಟ ಮೊಟ್ಟೆಯೊಡೆದು ಬಂದು ಬೆಳೆದ ಪರಿ, ಅದರ ಹರೆಯ, ಪ್ರಣಯ, ಪ್ರಸವ, ಮರಿಗಳ ಬೆಳವಣಿಗೆಯ ಸರಪಣಿಯೇ ಹೊರಬೀಳುತ್ತದೆ.

ಬ್ರಹ್ಮಾಂಡದಿಂದ ಕೀಟಾಂಡದ ಕತೆಗೆ ಇಳಿಯಬೇಕೆ? ಮಂತ್ರ ದ್ರಷ್ಟಾರನನ್ನು ಮರೆತು ಕೀಟ ಸಂಸಾರವನ್ನು ಅರಿಯಲು ಯತ್ನಿಸುತ್ತೇನೆ. "ಸರ್ವಂ ಖಲ್ವಿದಂ ಬ್ರಹ್ಮ!" ತಾನೇ? ಕೀಟವೂ ಬ್ರಹ್ಮವೇ! ಕೀಟಬ್ರಹ್ಮದ ಸೃಷ್ಟಿಯ ಬಗ್ಗೆ ಸೋಜಿಗ ನಟಿಸುತ್ತಾ, ಬ್ರಹ್ಮಾಂಡ ಸೃಷ್ಟಿಯ ಬೆರಗನ್ನು ಅರಗಿಸಲು ಯತ್ನಿಸುತ್ತೇನೆ.

ಗುಟುರ್ ಗುಕ್! ಗುಟುರ್ ಗುಕ್! ಕುಟುರ್! ಕುಟುರ್ ದೂರದಲ್ಲಿ ಹಕ್ಕಿಯೊಂದು ತಾನ–ತಾಳಗಳನ್ನು ಮೇಳೈಸಿ ಹಾಡುತ್ತಿದೆ.

"ಇದು ಯಾವ ಪಕ್ಷಿಯ ಧ್ವನಿ ಹೇಳು?" ರಾಯರು ಕೇಳುತ್ತಾರೆ. ಕುಟುರ್, ಕುಟುರ್ ಎನ್ನುತ್ತಿರುವುದು ಮರಕುಟಿಗನೇ ಇರಬೇಕು! ಯೋಚಿಸದೇ ಆ ಕೂಡಲೇ ಜವಾಬು ಕೊಡುತ್ತೇನೆ.

"ಥೂ! ನಿನ್ನ ಅಜ್ಞಾನವೇ! ಪ್ರಾಣಿಶಾಸ್ತ್ರಜ್ಞನ ಪತ್ನಿಯಾದದ್ದು ಸಾರ್ಥಕವಾಯ್ತು!" ಹಂಗಿಸುತ್ತಾರೆ. ಅದು ಪಾರಿವಾಳ! ಎಂದು ತಿದ್ದುತ್ತಾರೆ. ನಂತರ ಪ್ರಣಯ ಚೇಷ್ಟೆಗೆ ಹೆಸರಾದ ಪಾರಿವಾಳ ಜೋಡಿಯ ಹತ್ತಾರು ಶೃಂಗಾರ ಚೇಷ್ಟೆಗಳನ್ನು ವಿವರಿಸುತ್ತಾರೆ. ಪಾರಿವಾಳಪ್ರಣಯ ಸನ್ನಿವೇಶ, ಎದುರಾದರೆ ತಪ್ಪದೇ ತೋರಿಸುತ್ತಾರೆ. ಮಕ್ಕಳಲ್ಲಿ ಮಕ್ಕಳಾಗಿ ಜೋಡಿಯ ಪ್ರಣಯಲೀಲೆ ನೋಡಿ ನಲಿಯುತ್ತಾರೆ.

ಒಂದು ತಿರುವಿನಲ್ಲಿ, ಹಳೆಮನೆಯೊಂದಕ್ಕೆ ಹೊಂದಿದ್ದ ಹೆಮ್ಮರದಲ್ಲಿ ಹಲಪ್ರಕಾರದ ಹಕ್ಕಿಗಳ ವಾಸಸ್ಥಳವಿದೆ. ಬೆಳಗಿನ ಚಿಲಿಪಿಲಿ ನಿನಾದ ಆಹ್ಲಾದಕರವಾಗಿದೆ. ರಾಯರಿಗೆ ಈ ತಾಣ ಪ್ರಿಯವಾದದ್ದು. "ಈ ಕೂಗು ಕೇಳು! ಯಾವ ಪಕ್ಷಿಯದೆಂದು ಹೇಳು" ರಾಯರೆನ್ನುತ್ತಾರೆ.

ಗುಕ್, ಗುಕ್! ಕುವ್, ಕುವ್,! ಗುರುತಿಸಲಾಗದ ಹಕ್ಕಿಯ ದನಿ. ಸೋಲೊಪ್ಪಿಕೊಳ್ಳುತ್ತೇನೆ.

"ಕೋಗಿಲೆ!" ರಾಯರು ಗೆಲುವಿನಿಂದ ನುಡಿಯುತ್ತಾರೆ. "ಕೋಗಿಲೆಯೇ? ಅದು ಕೂಹೂ, ಕುಹು! ಎನ್ನುತ್ತದೆ. ವಸಂತ ಋತುವಿನಲ್ಲಿ ಅಷ್ಟೇ ಹಾಡುತ್ತದೆ ಅಲ್ಲವೆ?" ನನ್ನ ಕನ್ನಡ ಕವಿ ಸಮಯದ ಜ್ಞಾನ ಪ್ರಕಟಿಸುತ್ತೇನೆ.

"ಅದಕ್ಕೆ ಹೇಳುವುದು, ನಿಮ್ಮ ಯಾವತ್ತೂ ಓದು, ಕೆಲಸಕ್ಕೆ ಬಾರದ ಕವಿಕಲ್ಪನೆಗೇ ಮೀಸಲಾಗಿದೆ ಎಂದು! ಕಣ್ಣು, ಕಿವಿ ತೆರೆದಿಟ್ಟು ನಿಸರ್ಗದಿಂದ ಪಡೆಯಬಹುದಾದ ಶಿಕ್ಷಣ ನಿನ್ನಂಥ ಪುಸ್ತಕಕೀಟಕ್ಕೆ ಹರದಾರಿ ದೂರ! ಕೋಗಿಲೆಯ ಕುಯ್ಯಲಿಗೆ ಹಲವು ಹತ್ತು ಆಯಾಮಗಳಿವೆ!" ಎಂದು ಒಂದೊಂದಾಗಿ ಅದರ ಪ್ರತಿ ಕೂಗಿನ ಹಿಂದಿರುವ ಸಾಂಕೇತಿಕತೆಯನ್ನು ಹೇಳುತ್ತಾರೆ. "ಈಗ ನೀನು ಕೇಳಿದ ಕುಯ್ಯಲಿನ ಹಿಂದೆ ಒಂಟಿ ಕೋಗಿಲೆಯ ಆರ್ತತೆಯಿದೆ. ಜೊತೆಗಾತಿಗೆ ಒಲಿಸಿ ಬಾರೇ, ಬಾರೇ, ಜೊತೆಯನು ತೋರೇ! ಎಂದು ಹೇಳುವ ಅನುನಯವಿದೆ" ಎನ್ನುತ್ತಾರೆ. ಕೋಗಿಲೆಯ ಕೂಗು ವಸಂತ

ಋತುವಿಗಷ್ಟೆ ಸೀಮಿತವಾಗಿಲ್ಲವೆಂದು ತಿಳಿಹೇಳುತ್ತಾರೆ.

ರಾಯರಿಗೆ ಹಲವು ಪಕ್ಷಿಗಳ ಕೂಗಿನ ಅನುಕರಣೆ ಸಾಧಿಸಿದೆ. ಕೋಗಿಲೆಯ ಕೂಗೂ ಬರುತ್ತದೆ. ಒಮ್ಮೆ ಗಂಡುಕೋಗಿಲೆಯಿತ್ತ ಕೂಗಿಗೆ ಇವರು ಮೃದುವಾಗಿ 'ಕೂ!' ಕೊಟ್ಟರು. ಹುರುಪುಗೊಂಡ ಕೋಗಿಲೆ ಮತ್ತೆ ಮತ್ತೆ ಕೂಗಿತು. ಇವರೂ ಪ್ರತಿಕ್ರಿಯಿಸುತ್ತಲೇ ಇದ್ದರು. ಐದು ನಿಮಿಷಕ್ಕೂ ಹೆಚ್ಚುಕಾಲ ಇಬ್ಬರ ಕುಕಿಲು ಮುಂದುವರಿದಿತ್ತು! ನಾನೇ ಬೇಸತ್ತು ಇವರನ್ನು ಎಳೆದುಕೊಂಡು ಸಾಗಿದೆ.

ನಡೆದಂತೆ ನುಡಿಯುತ್ತ ಸಾಗುವ ರಾಯರ ಹೆಜ್ಜೆಗೆ ಸರಿಯಾಗಿ ನಡೆಯಲು ಯತ್ನಿಸಿ ತೇಕುತ್ತ ಸಾಗುತ್ತೇನೆ.

ನಡೆಯುತ್ತ ರಸ್ತೆದಾಟಿ, ಓಣಿಯಲ್ಲಿ ನಿಲ್ಲಿಸಿದ ಕೊಳಾಯಿ ನೀರು ಮಡುಗಟ್ಟಿದ ಜಾಗಕ್ಕೆ ಬರುತ್ತೇವೆ.

'ಸ್ನಾನದ ವೈಖರಿ' ನೋಡಿದೆಯ? ಎಂದು ಕೇಳುತ್ತಾರೆ. 'ಎಲ್ಲಿ? ಯಾರೂ ಇಲ್ಲವಲ್ಲ?' ಕಕ್ಕಾವಿಕ್ಕಿಯಾಗಿ ಕೇಳುತ್ತೇನೆ. ಆದರೆ ಮನುಷ್ಯರಲ್ಲ! ಇವರೆನ್ನುತ್ತಾರೆ.

ಈಗ ಎಚ್ಚತ್ತು ಸರಿಯಾಗಿ ನೋಡುತ್ತೇನೆ. ಕಾಕದಂಪತಿ, ನೀರು ಮಡುಗಟ್ಟಿದೆಡೆ ಸ್ನಾನದಲ್ಲಿ ಮೈಮರೆತಿದೆ. ಗಂಡುಹಕ್ಕಿ ಒಂದು ಚೆನ್ನಾಗಿ ಮುಳುಗುಹಾಕಿ, ಮೇಲೆ ಬಂದು ರೆಕ್ಕೆ ಝಾಡಿಸುತ್ತದೆ. ತುಂಟತನದಿಂದ ಜೊತೆಗಾತಿಯ ಮೈಮೇಲೆಲ್ಲ ನೀರು ಸಿಂಪಡಿಸುತ್ತದೆ. ಹೆಣ್ಣು ಕಾಗೆ, ಅದನ್ನು ಲೆಕ್ಕಿಸದೇ ಕೊಕ್ಕಿನಿಂದ ಇನಿಯನ ರೆಕ್ಕೆಗಳ ಅಡಿಯ ಕೊಳಕನ್ನು ಕುಕ್ಕಿ ಹೊರತೆಗೆಯುತ್ತದೆ. ಮತ್ತೆ ಅವೆರಡೂ ನೀರಿಗೆ ಇಳಿಯುತ್ತವೆ. ಮನದಣಿ ಮೀಯುತ್ತವೆ. ಸುತ್ತಲ ಜಗತ್ತನ್ನು ಮರೆತು ಅವನ್ನು ನೋಡುವಲ್ಲಿ ರಾಯರು ಮೈ ಮರೆಯುತ್ತಾರೆ. ಅಕ್ಕ ಪಕ್ಕದಲ್ಲಿ ಹಾದು ಹೋಗುವವರೆಲ್ಲ ವಿಚಿತ್ರವಾಗಿ ನಮ್ಮನ್ನ ನೋಡುತ್ತಿದ್ದಾರೆ.

'ಬನ್ನಿ ಹೋಗೋಣ!' ಒತ್ತಾಯದಿಂದ ರಾಯರನ್ನು ಅಲ್ಲಿಂದ ಹೊರಡಿಸುತ್ತೇನೆ. ಈಗ ಕಾಕಪುರಾಣ ಬಿಚ್ಚಿಕೊಳ್ಳುತ್ತದೆ. ಕಾಗೆಯ ಕೂಗಿನ ಹಲವಾರು ಪ್ರಕಾರಗಳು, ಅವುಗಳ ಹಿಂದಿರುವ ಸಾಂದರ್ಭಿಕತೆ, ಸಾಂಕೇತಿಕತೆಗಳನ್ನು ಅವರು ಅಭ್ಯಸಿಸಿದ್ದಾರೆ. ತಾಯಿ ಕಾಗೆ ಮರಿಗಳಿಗೆ ನೀಡುವ ಎಚ್ಚರಿಕೆಯ ಕ್ಯಾಕ್! ಕಾವ್! ಕ್ಯಾಕ್ ಕಾವ್! ತರುಣಿಯನ್ನು ತನ್ನವಳನ್ನಾಗಿಸಲು ತರುಣ ಕಾಗೆಯ ಕಾಕ್ ಕಾ! ಕಾಕ್ ಕಾ!, ಹದ್ದು ಅಟ್ಟಿಸಿಕೊಂಡು ಬಂದಾಗ ಕಾಕ ಸಂಕುಲದ ಕಾವ್! ಕಾವ್ ಕಾವ್! ಕಾವ್, ಹಾಗೂ ಆಹಾರ ಸಾಮಗ್ರಿ ಗೋಚರಿಸಿದಾಗ ಜೊತೆಗೂಡಿದ ಕಾ! ಕಾ! ಕಾ ಪ್ರಕಾರಗಳೆಲ್ಲ ಅವರಿಗೆ ಕಂಠಪಾಠ. ಕಾಕ ಧ್ವನಿ ಮಾತ್ರದಿಂದಲೇ ಹೆಣ್ಣು, ಗಂಡು, ಮರಿ, ಮುದಿ ಕಾಗೆಗಳನ್ನು ಗುರುತಿಸಬಲ್ಲರು.

ನಡೆದಂತೆ ನುಡಿಯುತ್ತ ಹೋಗುವ ರಾಯರನ್ನು ನಡೆ-ನುಡಿಗಳಲ್ಲಿ ಸರಿಗಟ್ಟುವುದು ನನಗಂತೂ ಸಾಧ್ಯವಿಲ್ಲ. ಹೀಗಾಗಿ ಕೀಟ ಪಕ್ಷಿಗಳಿಗೆ ಇವರು ಪ್ರತಿಕ್ರಿಯಿಸುತ್ತ ನಡೆಯುವದೇ ವಾಸಿ! ಅನಿಸುತ್ತದೆ. ಅವರಿಗೆ ವಾಕಿಂಗ್, ವ್ಯಾಯಾಮಕ್ಕಿಂತ ಹೆಚ್ಚು ಮನರಂಜನೆಗೆ, ಸೃಷ್ಟಿ ವೀಕ್ಷಣೆಗೆ, ನಿಸರ್ಗದ ನುಡಿಗೆ ಜೊತೆ ಕೊಡಲು ನಡಿಗೆ.

ನನಗೋ! ವ್ಯಾಯಾಮಕ್ಕೆ, ಕಾಲುನೋವು, ಗಂಟುನೋವು, ಜೋಮುಗಳನ್ನು ಕಡಿಮೆ ಮಾಡಲಿಕ್ಕೆ ತಿಂದ ಅನ್ನ ಅರಗಲಿಕ್ಕೆ, ಬೇಕು ನಡಿಗೆ.

ಅಂತೂ, ನನಗೆ ಅವಶ್ಯವಿದ್ದ ವಾಕ್ ಜೊತೆಗೆ ರಾಯರ ವಾಗ್ ವೈಖರಿ ಸೇರಿಕೊಂಡು ಓಡಾಟದೊಂದಿಗೆ ಜೀವನ ಪಾಠ ಲಭಿಸಿದೆ. ■

# ಎಲ್ಲೆಲ್ಲೂ ಲಭ್ಯ!

**"ಪ್ರತಿದಿನ ಸಂಜೆಯೊಳಗಾಗಿ ಮನೆಗೆ ಬರುತ್ತಿದ್ದ 'ರಾಯ'ರು ಈ ದಿನ ಗಂಟೆ ಎಂಟಾದರೂ ಮನೆಗೆ ಬಾರದಿದ್ದಾಗ ಮನೆಯಾಕೆ ಆತಂಕದಿಂದ ಪತಿಯ ಆಗಮನವನ್ನೇ ಎದುರು ನೋಡುತ್ತಿದ್ದರು. ಹಾಗಾದರೆ 'ರಾಯ'ರು ಹೋಗಿದ್ದಾದರೂ ಎಲ್ಲಿಗೆ...?"**

ಮನೆಗೆ ಬೇಕಾದ ಕಿರಾಣಿ ಸಾಮಾನುಗಳನ್ನೆಲ್ಲ ಉದ್ರಿ ಖರೀದಿಸಿ, ಕೈಗೆ ಸಂಬಳ ಬಂದಾಗ ಅವುಗಳ ಮೊತ್ತವನ್ನು ಚುಕ್ತಾ ಮಾಡುವುದನ್ನು ರೂಢಿಸಿಕೊಂಡಿದ್ದೆ. 'ಕಾಸಿದ್ದರೆ ಮಾತ್ರ ಖರೀದಿಸು' ಎಂಬ ರಾಯರ ಸೂತ್ರವನ್ನು ಅಳವಡಿಸಿಕೊಳ್ಳುವುದರಲ್ಲಿ ಕಷ್ಟಕ್ಕಿಟ್ಟುಕೊಂಡಿತು. ಅಡಿಗೆ ಮನೆಯ ಡಬ್ಬಿಗಳೆಲ್ಲ ಖಾಲಿಯಾದಾಗೊಮ್ಮೆ ಹಲವಾರು ಕೈಚೀಲಗಳು ಹಾಗೂ ಕೆಲಸದಾಕೆಯೊಂದಿಗೆ 'ಸಂತೋಷ್' ಕಿರಾಣಿ ಅಂಗಡಿಗೆ ಧಾವಿಸಿ, ಸಾಮಾನುಗಳ ಯಾದಿಯನ್ನು ಕೊಟ್ಟಾಗ ಅಂಗಡಿಯಾತ, ರೋಖ ವ್ಯಾಪಾರ ಮಾಡುವವರತ್ತ ಸಕಲ ಲಕ್ಷ್ಯವನ್ನು ಪೂರೈಸಿ, ಉದ್ರಿಯವರಿಗೆ ಬೆಂಚ್ ತೋರಿಸಿ ಕೊಳೆ ಹಾಕುತ್ತಿದ್ದ. ನಮ್ಮ ಸರದಿಗಾಗಿ ಆಕಳಿಸುತ್ತ ಕಾಯುವದೊಂದೇ ಮಾರ್ಗ ಆಗ ಇರುತ್ತಿತ್ತು. ಅಂಗಡಿಕಾರನು ಹಳೇ ಸರಕನ್ನು ಕಡಿಮೆ ತೂಕದೊಂದಿಗೆ ಹೆಚ್ಚಿನ ಬೆಲೆಗೆ ಮಾರುತ್ತಾನೆಂಬ ಅರಿವಿದ್ದರೂ ಸದಾಕಾಲ, ಕೈ ಬರಿದಾಗಿರುತ್ತಿದ್ದುದರಿಂದ 'ಪಾಲಿಗೆ ಬಂದದ್ದೇ ಪಂಚಾಮೃತ' ಎಂದು ಸವಿಯದೇ ಗತಿಯಿರುತ್ತಿರಲಿಲ್ಲ. ವಿವಾಹದೊಂದಿಗೆ ಈ ಅನುಭವಗಳೆಲ್ಲ ಗತೇತಿಹಾಸಕ್ಕೆ ಸೇರಿದವು. ಇದರಿಂದ ಖುಷಿಯಾದರೂ ಹೊಸ ಸಮಸ್ಯೆಗಳು 'ಬುಸ್' ಎಂದು ತಲೆ ಎತ್ತಿ ಅಣಕಿಸಲಾರಂಭಿಸಿದವು.

ರಾಯರು ಎಂದೂ ಕಿಸೆಯಲ್ಲಿ ಕಾಸಿಲ್ಲದೇ ಯಾವ ಕೆಲಸಕ್ಕೂ ಕೈಹಾಕಿದವರೇ ಅಲ್ಲ. ಅಂತೆಯೇ ನವವಧುವಿನ ಹತ್ತಾರು ಬೇಡಿಕೆಗಳನ್ನು ಒಂದೆರಡಕ್ಕೆ ಇಳಿಸಲಾರಂಭಿಸಿದರು. ಸಾಲದ್ದಕ್ಕೆ ಒಂದೇ ಅಂಗಡಿಗೆ ಹೋಗಿ ಅವರು ಹೇಳಿದ ರೇಟಿಗೆ ಸಾಮಾನು ಕೊಳ್ಳದೇ, ಎರಡು ಮೂರು ಅಂಗಡಿಗಳಲ್ಲಿ ಸಾಮಾನು, ಬೆಲೆಗಳನ್ನು ಪರೀಕ್ಷಿಸಿಯೇ ಕೊಳ್ಳಬೇಕೆಂಬ ಕಡ್ಡಾಯ ಬೇರೆ! ಇದೆಲ್ಲ ನನ್ನ ಜಾಯಮಾನಕ್ಕೆ ಒಗ್ಗಿದ್ದಲ್ಲ. ಆದ್ದರಿಂದ ಬೇಕಾದ ವಸ್ತುಗಳ ಲಿಸ್ಟ್ ತಯಾರಿಸಿ ಅವರ ಕೈಗಿತ್ತು ಖರೀದಿಯ ಸಕಲ ಜವಾಬ್ದಾರಿಯನ್ನೂ ಅವರಿಗೊಪ್ಪಿಸಿ ಕೈತೊಳಕೊಂಡೆ. ಆದರೆ ಚೌಕಾಸಿ ಮಾಡಿ ಮನೆಗೆ ತಂದ ಸಾಮಾನುಗಳ ಕುಂದುಕೊರತೆಗಳನ್ನು ಎತ್ತಿ ತೋರಿಸುವ ಅಧಿಕಾರವನ್ನು ಮಾತ್ರ ಇಟ್ಟುಕೊಂಡೆ. ಬೇಳೆ ಬೇಯುವುದಿಲ್ಲ. ಸಕ್ಕರೆ ಕಡಿಮೆ ಸಿಹಿ(ಬೂರಾ ಇರಬೇಕು) ಕಡಲೆಕಾಳು ದೊಡ್ಡವಿಲ್ಲ ಎಂದೆಲ್ಲ ಟೀಕಿಸಲಾರಂಭಿಸಿದೆ. ಇದು ಏನೂ ಚೆನ್ನಾಗಿಲ್ಲ. ಹಿಂದಿರುಗಿಸಿ ಬೇರೆ ತನ್ನಿ! ಎಂದು ದುಂಬಾಲು ಬಿದ್ದರೂ ರಾಯರು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ.

ಒಮ್ಮೆ ತಂದ ಚಹಾಪುಡಿ, ಏನೇನೂ ವಾಸನೆಯಿಲ್ಲ. ಕಟ್ಟಿಗೆ ಪುಡಿಯಂತಿದೆ. ಹಿಂದಿರುಗಿಸಲೇಬೇಕು ಎಂದು ಪಟ್ಟು ಹಿಡಿದೆ. ಪತ್ನಿಯ ಸಂತೋಷಕ್ಕಾಗಿ ಪೇಟೆಗೆ ಹೊರಟರು. ಒಂದು ಗಂಟೆಯ ಬಳಿಕ ತಂದ ಪೊಟ್ಟಣ ಬಿಡಿಸಿ ಮೂಗನ್ನು ಅರಳಿಸಿ ಮೂಸುತ್ತ "ನೋಡಿದಿರಾ? ಇದು ಎಷ್ಟು ಚೆನ್ನಾಗಿದೆ" ಎಂದಾಗ ರಾಯರು ಗಹಗಹಿಸಿ

ನಕ್ಕರು. ಪೆಚ್ಚಾಗಿ ಅವರ ಮುಖ ನೋಡಿದಾಗ ಹಿನ್ನೆಲೆಯನ್ನು ವಿವರಿಸಿದರು. "ಸಾಮಾನುಗಳ ಸರಿಯಾದ ಪರೀಕ್ಷೆ ಇರುವುದು ಬೇರೆ. ಮೇಲ್ನೋಟಕ್ಕೆ ಇತ್ಯರ್ಥ ಮಾಡುವುದು ಬೇರೆ. ನಾನು ಹೊರಗೆ ಹೋಗಿ ಅಲೆದಾಡಿ ಬಂದರೂ ಅದೇ ಚಹಾಪುಡಿ ಪ್ಯಾಕೆಟ್ ಹಿಂತಿರುಗಿ ತಂದಾಗ ಅದು ಉತ್ಕೃಷ್ಟವಾಗಿ ಹೇಗೆ ಪರಿವರ್ತನೆಗೊಂಡಿತು ಎಂದು ನನಗೆ ಭ್ರಮೆಯಾಗಿದೆ. ನಾನು ಕೊಳ್ಳುವ ಸಾಮಾನುಗಳನ್ನೆಲ್ಲ ಚೌಕಾಸಿ ಮಾಡಿದರೂ, ಗುಣಮಟ್ಟವನ್ನು ಪರೀಕ್ಷೆ ಮಾಡಿಯೇ ಕೊಂಡುಕೊಳ್ಳುತ್ತೇನೆ. ಅವುಗಳನ್ನು ಪುನಃ ಒರೆಗಲ್ಲಿಗೆ ಹಚ್ಚಿ ನೋಡುವ ನಿನ್ನ ಪ್ರಯತ್ನ ವ್ಯರ್ಥ" ಎಂದು ಸಾರಿಬಿಟ್ಟರು. ಅಂದಿನಿಂದ ರಾಯರು ಎಂಥಾ ಸಾಮಾನು ತಂದರೂ ಕಾಮೆಂಟ್ ಮಾಡದೇ 'ಅಮೋಘವಾಗಿದೆ' ಎಂದು ಉದ್ಗರಿಸುವುದನ್ನು ರೂಢಿಸಿಕೊಂಡೆ.

ನಾವು ಬೆಂಗಳೂರು ನಿವಾಸಿಗಳಾಗುವುದೆಂದು ನಿರ್ಧಾರವಾದ ಬಳಿಕ, ಅಲ್ಲಿ ದೊರೆಯುವ ಸವಲತ್ತುಗಳ ಕುರಿತು ಅಕ್ಕನಿಂದ ವಿವರವಾದ ಮಾಹಿತಿ ಪಡೆದು ಗೆಲುವಾದೆ. ಯಶವಂತಪುರದಲ್ಲಿ ಠೋಕ ವ್ಯಾಪಾರಿಗಳಿಂದ ವರ್ಷಕ್ಕಾಗುವಷ್ಟು ಕಾಳುಕಡಿಗಳನ್ನು ಸಸ್ತಾ ಪಡೆಯಬಹುದು. ಅಲ್ಲದೇ ದಿನನಿತ್ಯ ಬೇಕಾಗುವ ದಿನಸಿಯ ದೊಡ್ಡ ದೊಡ್ಡ ಅಂಗಡಿಗಳಿವೆ. ಮನೆಯಿಂದ ಫೋನಿಸಿದರೆ ಆಯ್ತು. ಬೇಕು ಬೇಕಾದ ಜೀನಸುಗಳನ್ನೆಲ್ಲ ಸ್ವಚ್ಛಮಾಡಿ ಪ್ಯಾಕ್ ಮಾಡಿದವುಗಳನ್ನೆಲ್ಲ ಮನೆಗೆ ತಂದು ತಲುಪಿಸುತ್ತಾರೆ. ಇದಕ್ಕಾಗಿ ಬೇರೆ ಹೆಚ್ಚಿನ ಬೆಲೆ ತೆರಬೇಕಾಗಿಲ್ಲ ಎಂದು ಅರಿತು ಹಿಗ್ಗಿ ಹೋದೆ. ಈ ಏರ್ಪಾಡಿಗೆ ರಾಯರನ್ನು ಒಪ್ಪಿಸುವುದು ಕಷ್ಟವಾಗಲಿಲ್ಲ. ಟ್ಯಾಕ್ಸಿಯಲ್ಲಿ ಹೋಗಿ ಠೋಕ ಖರೀದಿಸು ಅಥವಾ ಫೋನಿಸಿ ವ್ಯಾನ್ ತುಂಬ ತರಿಸು ಎಂದು ಸಾಮಾನು ಖರೀದಿಯ ತಮ್ಮ ಹೊಣೆಯಿಂದ ಬಿಡುಗಡೆ ಪಡೆದರು. ಆದರೆ ಸಗಟು ವ್ಯಾಪಾರಿಗಳು ಯಾವುದೇ ಕಾಳು ಕಡಿಯನ್ನು ಕ್ವಿಂಟಲ್‌ಗಟ್ಟಲೆಯಾಗಿಯೇ ಮಾರುವುದು! ಎಂದು ಕಡ್ಡಿ ಮುರಿದಂತೆ ಹೇಳಿದರು. ನಾಲ್ಕೈದು ಗೃಹಿಣಿಯರನ್ನು ಸೇರಿಸಿ ಪಾಲು ಮಾಡಿಕೊಳ್ಳುವ ಯೋಜನೆ ಹಾಕಿದೆ. ಒಬ್ಬಳು ತಾನು ಸೋನಾಮಸೂರಿ ಮಾತ್ರ ಬಳಸುವುದು ಎಂದರೆ, ಇನ್ನೊಬ್ಬಳಿಗೆ ಬಂಗಾರ ಸಣ್ಣ, ಮೂರನೆಯವಳಿಗೆ ಬಾಸುಮತಿಯೇ ಬೇಕು ಎಂದು ಅರಿವಾಯ್ತು. ಮಹಿಳೆಯರ ಸಂಘಟನೆ ಬಲು ಕಷ್ಟದ್ದು ನೋಡಿ!

'ಬೈ ಅಂಡ್ ಸೇವ್' (ಖರೀದಿಸಿ ಉಳಿಸಿ) ಅಂಗಡಿಗೆ ಫೋನಿಸಿದೆ. ಸಾವಿರಾರು ರೂಪಾಯಿ ದಿನಸಿ ಖರೀದಿ ಮಾಡಿದರೆ ಮಾತ್ರ 'ಹೋಂ ಸಪ್ಲೈ' ಎಂದು ಪತ್ತೆ ಹತ್ತಿತು. ಅಂತೆಯೇ ಆರು ತಿಂಗಳಿಗಾಗುವಷ್ಟು ಅಕ್ಕಿ, ವರ್ಷಕ್ಕಾಗುವಷ್ಟು ಗೋಧಿ, ಮೂರು ವರ್ಷಕ್ಕಾಗುವಷ್ಟು ಬ್ಯಾಡಗಿ ಮೆಣಸಿನಕಾಯಿ, ನಾಲ್ಕು ವರ್ಷಕ್ಕಾಗುವಷ್ಟು ಹವೀಜ, ಉಪ್ಪು, ಜೀರಿಗೆಗಳಿಗೆ ಆರ್ಡರ್ ಕೊಟ್ಟೆ. ಅಂಗಡಿ ಬಾಯ್ ಬಿಲ್ ಸಹಿತ ವ್ಯಾನಿನಲ್ಲಿ ಸಾಮಾನು ತಂದು ಇಳಿಸಿ ಹಣ ಕೇಳಿದ. 'ಸಂಬಳ ಬಂದ ನಂತರ ಕೊಡುತ್ತೇನಯ್ಯ' ಎಂದಾಗ ಆ ಸವಲತ್ತು ಹಳಬರಿಗೆ. ನೀವು ಹೊಸಬರು. ಈಗಲೇ ಚುಕ್ತಾ ಮಾಡಿ ಎಂದು ಪಟ್ಟು ಹಿಡಿದ. ನಿರುಪಾಯಳಾಗಿ ರಾಯರು ಶೇಖರಿಸಿಟ್ಟ ನೋಟುಗಳಿಗೆ ನಾನು ಅಡಗಿಸಿಟ್ಟ ಹಣ, ನಾಣ್ಯಗಳ ರಾಶಿಯನ್ನೆಲ್ಲ ಸೇರಿಸಿ ಅವನಿಗೆ ಕೊಟ್ಟಾಗಲೇ ಬೆಂಗಳೂರಿನ ಸೌಕರ್ಯದ ಪರಿಚಯವಾಯ್ತು.

ರಾಯರು ಈ ಸಾಹಸ ಕುರಿತು ಚಕಾರ ಎತ್ತಲಿಲ್ಲ. ಹೀಗಾಗಿ ನನಗೇ ಮುಜುಗರವಾಯಿತು. ತಂದ ದವಸಧಾನ್ಯಗಳನ್ನೆಲ್ಲ, ಮಸಾಲೆ ಸಾಮಾನುಗಳನ್ನೆಲ್ಲ ಬಿಸಿಲಿಗೆ ಹಾಕಿ ಡಬ್ಬಿ, ಬಾಟ್ಲಿಗಳಲ್ಲಿ ತುಂಬಿಡುವುದೇ ದೊಡ್ಡ ರಾಮಾಯಣವಾಗಿಬಿಟ್ಟಿತು. ರಾಯರಿಂದ ಒಂದಾದರೂ ಐಟಮ್ಮಿಗೆ ತಲೆ ತೂಗಿಸಿಕೊಳ್ಳಬೇಕೆಂದು "ಟೀ ಪೌಡರ್

ಪ್ಯಾಕೆಟ್ ನೋಡಿದ್ರಾ? ಎಷ್ಟೊಂದು ಅಗ್ಗವಾಗಿದೆ ಎಂದಾಗ ನೀನು ಊಹಿಸಿದಂತೆ ಇದು ಅರ್ಧ ಕೆಜಿ ಪೊಟ್ಟಣವಲ್ಲ ಕೇವಲ ಕಾಲು ಕೆಜಿ" ಎಂದು ಮೇಲೆ ಮುದ್ರಿಸಿದ್ದನ್ನು ಬೆಟ್ಟು ಮಾಡಿ ತೋರಿಸಿದರು. ಅಲ್ಲದೇ ಹಾರ್ಲಿಕ್ಸ್, ಉಪ್ಪಿನಕಾಯಿ ಮೊದಲಾದ ಬಾಟ್ಲಿಗಳ ಮೇಲೆ ನಮೂದಿಸಿದ ಕಾಲಾವಧಿ ಮೀರಿ ಹೋಗಿದ್ದನ್ನು ಗಮನಕ್ಕೆ ತಂದರು. ಕಾಳುಕಡಿಗಳು ಈಗಾಗಲೇ ಕೀಟಬಾಧೆಗೆ ಒಳಗಾಗಿವೆ ಎಂದು ರಾಯರಿಗೆ ತಿಳಿಸುವ ಸಾಹಸಮಾಡಿದ್ದಿಲ್ಲ. ತೂಕವೂ ಕಡಿಮೆ ಇದ್ದುದನ್ನು ಅವರೇ ಕಂಡುಕೊಂಡರು. "ಎಲ್ಲರೂ ಧನಿಕರಾಗುವ ಹವಣಿಕೆಯಲ್ಲಿದ್ದಾಗ ನಾವು ಜಾಣರಾಗಿದ್ದು, ಮೋಸ ಹೋಗದಂತೆ ಸದಾಕಾಲ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ನನ್ನ ಮನರಂಜನೆಗೆಂದು ನಾನು ಅಂಗಡಿಯಿಂದ ಅಂಗಡಿಗೆ ಎಡತಾಕುತ್ತೇನೆಂದು ನೀನು ತಿಳಿದಂತಿದೆ" ಎಂದು ಅನ್ನದೇ ಇರಲಿಲ್ಲ. "ಹಾಗಲ್ಲರಿ ಕ್ರಿಯಾಶೀಲರಾಗಿರುವ ನಿಮ್ಮ ವೇಳೆ ಹೆಚ್ಚು ಉಪಯುಕ್ತ ಚಟುವಟಿಕೆಗಳಿಗೆ ಮೀಸಲಾಗಲಿ ಎಂಬ ಸದುದ್ದೇಶ ನನ್ನದು. ನನ್ನನ್ನು ಕಂಡರೆ ಸುಲಭವಾಗಿ ಮೋಸ ಹೋಗುವ ಪ್ರಾಣಿ ಎಂದು ವ್ಯಾಪಾರಸ್ಥರಿಗೆ ಅನಿಸುತ್ತಿದ್ದಿರಬೇಕು. ಇನ್ನು ಮುಂದೆ ತರಕಾರಿಯಿಂದ ಹಿಡಿದು ನನ್ನ ಬಟ್ಟೆ ಬರೆ ಖರೀದಿಯ ಜವಾಬ್ದಾರಿಯೂ ನಿಮಗೇ ಇರಲಿ" ಎಂದು ಸರ್ವತ್ಯಾಗಿಯಂತೆ ಮಾತನಾಡಿದಾಗ ರಾಯರು ನಕ್ಕರು.

ರಾಯರು 'ಫೋಟೊ ತೀಟೆ'ಯವರಲ್ಲವೇ? ಕೈಯಲ್ಲಿ ಕ್ಯಾಮರಾ ಹಿಡಿದು ಹೂ, ಹಣ್ಣು, ಹೈದ-ಹೆಣ್ಣು, ಡೇಗೆ-ಗೂಗೆಗಳನ್ನು ಸೆರೆ ಹಿಡಿಯಲು ದಿನಕ್ಕೆರಡು ಬಾರಿ ಹೊರಗೆ ಹೊರಟರೇ ನಾಲ್ಕು ಕೈಚೀಲಗಳೂ ಜೊತೆಗಿರುತ್ತವೆ. ಪ್ರತಿಸಲವೂ ಮನೆಯ ಹೊರಗೆ ಕಾಲಿಡುತ್ತಿದ್ದಂತೆ ಏನು ಸಾಮಾನು ತರಬೇಕು? ಎಂದು ತಪ್ಪದೇ ಕೇಳುವ ಪ್ರಶ್ನೆಗೆ ಏನೂ ಇಲ್ಲ ಎಂದು ನನ್ನ ಉತ್ತರ ಸದಾ ಇದ್ದದ್ದೇ. ಇಷ್ಟಾದರೂ ಹಸಿಮೆಣಸು, ಶುಂಠಿ, ಲಿಂಬೇಹಣ್ಣು, ಕೊತ್ತಂಬರಿ, ಈರುಳ್ಳಿ ಮುಂತಾದವನ್ನು ಪೂರ್ಣ ಖಾಲಿ ಆಗುವ ಪೂರ್ವದಲ್ಲಿಯೇ ತಾನೇ ಮುಂದಾಲೋಚನೆಯಿಂದ ತಂದು ನನ್ನ ಅಡಿಗೆಗೆ ಯಾವ ಅಡಚಣೆಯೂ ಬಾರದಂತೆ ನೋಡಿಕೊಳ್ಳುತ್ತಾರೆ. ಇದರಿಂದಾಗಿ ಈ ಮೂವತ್ತೈದು ವರ್ಷಗಳ ಕಾಲಾವಧಿಯಲ್ಲಿ ಒಂದು ದಿನವೂ ನೆರೆ ಹೊರೆಯವರಿಂದ ಒಂದಾದರೂ ಸಾಮಾನು ಕೈಗಡ ತರುವ ಪ್ರಸಂಗ ಬರಲಿಲ್ಲ. ನನ್ನ ವೈಯಕ್ತಿಕ ಅವಶ್ಯಕತೆಯ ವಸ್ತುಗಳ ಯಾದಿ ಮಾಡುವುದನ್ನು ಕೂಡ ಮರೆತಿರುತ್ತೇನೆ. ಆದರೂ ಎಂದೊ ನೆನಪಿಸಿಕೊಂಡು ಮರೆತ ಕ್ಲಿಪ್, ಸೇಫ್ಟಿಪಿನ್, ಬಿಂದಿ, ಪೌಡರ್‌ಗಳನ್ನು ಅವರಾಗಿಯೇ ತಂದುಕೊಡುತ್ತಾರೆ. ತೀರ ಅಪರೂಪಕ್ಕೆ ಇಂಥದೊಂದು ಸಾಮಾನು ಬೇಕಿತ್ತು, ಮೊದಲೇ ಹೇಳಲು ಮರೆತೆ ಎಂದು ರಾಗ ಎಳೆದರೆ ಸಾಕು ತತ್‌ಕ್ಷಣ ಬಟ್ಟೆ ತೊಟ್ಟು ಹೊರಟರೇ ಬಿಸಿಲು, ಮಳೆ, ಗಾಳಿ ಕತ್ತಲೆ ಒಂದನ್ನೂ ಲೆಕ್ಕಿಸುವುದಿಲ್ಲ. ನನ್ನ ಅಜಾಗ್ರತೆಯಿಂದ ಸುಮ್ಮನೆ ದುಡಿಸಿದೆನಲ್ಲ! ಇನ್ನು ಮುಂದೆ ಮುಂಜಾಗ್ರತೆಯಿಂದ ವರ್ತಿಸಬೇಕು. ಮೊದಲೇ ಗುರುತು ಹಾಕಿಕೊಳ್ಳಬೇಕು ಎಂದು ನಿರ್ಧರಿಸುತ್ತೇನೆ. ಆದರೆ ಇದು ಮನೆ ಕಟ್ಟಿಕೊಳ್ಳುವ ಕೋತಿಗಳ ನಿರ್ಧಾರದಂತೆ ಕ್ಷಣಿಕ! ತಿರುಗಿ ಹಿಂದಿನ ಕ್ರಮವೇ ಮುಂದುವರಿಯುವುದು.

ಮಳೆಗಾಳಿ ಲೆಕ್ಕಿಸದೇ ಶತಾಯುಷಿ ವೃದ್ಧೆಯೋರ್ವಳ ವೈಕುಂಠ ಸಮಾರಾಧನೆಗೆ ಹೋಗಿ ನೆನೆದು ಬಂದದ್ದರಿಂದ ಒಮ್ಮೆಲೆ ನೆಗಡಿ, ಶೀತ, ಕೆಮ್ಮುಗಳು ಕಾಣಿಸಿಕೊಂಡವು. ಬಾಯಿ ರುಚಿ ಕೆಟ್ಟು ಹೋಗಿತ್ತು. ಏನೇನೂ ಸೇರದೆ ಬಿಸ್ಕತ್ತು ಇದ್ದರೆ ತಿಂದು ಒಂದಿಷ್ಟು ಹಾಲು ಕುಡಿಯ ಬಹುದಾಗಿತ್ತು ಎಂದು ಸ್ವಗತ ಎಂಬಂತೆ ಉಸುರಿದ್ದೇ ತಡ ರಾಯರು ಹೊರಟೇ ಬಿಟ್ಟರು. "ಹೋಯ್, ಸಿಹಿಮೂತ್ರದ ರೋಗಿಗಳು ತಿನ್ನುವ ಮಾರಿ ಬಿಸ್ಕತ್ತು ಬೇಡ. 'ಟಾಯ್ಗರ್'

ಬ್ರಾಂಡ್ ತನ್ನಿ. ಎಲ್ಲ ಅಂಗಡಿಗಳಲ್ಲಿ ಸಿಗುತ್ತದೆ" ಎಂದು ಧ್ವನಿ ಎತ್ತರಿಸಿ ಸಾರಿದರೂ ರಾಯರು ಕಿವಿಯ ಮೇಲೆ ಹಾಕಿಕೊಂಡರೋ ಇಲ್ಲವೋ ಎಂದು ಮುಜುಗರವಾಯಿತು.

ಯಾವುದೇ ಕೆಲಸವಿರಲಿ, ರಾಯರು ಚಾಚೂ ತಪ್ಪದೇ ಸರಿಯಾದ ವೇಳೆಗೆ ಮಾಡಿ ಮುಗಿಸುವುದನ್ನು ಮೈಗೂಡಿಸಿಕೊಂಡಿದ್ದಾರೆ. ನಸುಕಿನಲ್ಲಿ ಏಳುವುದು, ಕಾಫಿ, ತಿಂಡಿ, ಊಟ ಎಲ್ಲವೂ ವೇಳಾಪತ್ರಿಕೆಯಂತೆ ನಡೆಯಲೇಬೇಕು. ಅಂತೆಯೇ ಎಂಥ ಕೆಲಸದ ಮೇಲೆ ಹೋದರೂ ಸಂಜೆ ಏಳು ಗಂಟೆಗೆ ವಾಪಸ್ ಆಗಲೇಬೇಕು. ಹೊಟೇಲಿಗೆ ಹೋಗುವುದಾಗಲಿ, ಸ್ನೇಹಿತರೊಡನೆ ಹರಟೆಯಾಗಲಿ ಅವರ ಜಾಯಮಾನಕ್ಕೆ ಹೇಳಿದ್ದಲ್ಲ. ಅಂದು ಎಂಟು ಗಂಟೆ ಜಾರಿಕೊಂಡರೂ ರಾಯರು ಹಿಂದಿರುಗದ್ದರಿಂದ ಕಳವಳ ಪ್ರಾರಂಭವಾಯ್ತು. ಅವರ ಫೋಟೋ ಅಂಗಡಿಗೆ ಫೋನಿಸಿ ಬಂದಿದ್ದರೇ? ಎಂದು ವಿಚಾರಿಸಿದೆ. "ಇಲ್ಲಮ್ಮ, ಅವರು ಮಾಡಿಕೊಟ್ಟ ವರ್ಣ ಪಾರದರ್ಶಿಕೆಗಳು, ಒಂದು ದಿನ ಮುಂಚಿತವಾಗಿಯೇ ಬಂದಿದ್ದರಿಂದ ಈ ಕಡೆಗೆ ಬಂದರೆ ಕೊಡೋಣಾಂತ ಕಾದಿದ್ದೆ. ಬರಲೇ ಇಲ್ಲ" ಎಂದು ಉತ್ತರ ಬಂದಿತು. ಝುರಾಕ್ಸ್ ಅಂಗಡಿಯ ಹನುಮಯ್ಯ "ಸ್ವಾಮ್ಯೋರು ತಮ್ಮ ಇಡೀ ಪುಸ್ತಕಾನೇ ಬರೆದು ಮುಗ್ಸಿದ್ದನ್ನು ಝುರಾಕ್ಸ್ ಮಾಡ್ಸತೀನಿ ಅಂದಿದ್ರು, ಯಾಕೋ ಬಂದೇ ಇಲ್ಲ" ಎಂದ. ಕುರುಕಲು ತಿಂಡಿಯ ವಿತರಣೆಗಾರ "ಇಂದು ಶುಕ್ರವಾರ ಅಲ್ವೇ? ಈ ದಿವ್ಸ ತಪ್ಪದೇ ಬರೋರು. ತಾಜಾ ಓಂಪುಡಿ, ಬೋಂಡ, ಕಳ್ಳೆಕಾಯಿ ಎತ್ತಿ ಮಡ್ಗಿದೀನಿ. ಈವೊತ್ತು ಬರೋದು ಕಾಣೆ" ಎಂದುಬಿಟ್ಟ. ಅವರು ದಿನವೂ ಹೋಗಿ ಬರುವ ಇನ್ನೂ ಎರಡು ಮೂರು ಕಡೆ ವಿಚಾರಿಸಿದೆ. ಎಲ್ಲೆಲ್ಲೂ ನಿರಾಶೆಯೇ ಕಾದಿತ್ತು.

ಒಂಬತ್ತು ಗಂಟೆ ದಾಟಿದಾಗ ರಾಯರ ಸವಾರಿ, ನಿಧಾನವಾಗಿ ಬರುತ್ತಿದ್ದುದು ಕಂಡಿತು. ಸಂತೋಷವಾಗುವ ಬದಲು ಕೋಪ ನೆತ್ತಿಗೇರಿತು. ಅದಕ್ಕೆ ಸರಿಯಾದ ಮಾತಿನ ರೂಪ ಕೊಡಲು ಯತ್ನಿಸಿದಾಗ "ಮೊದಲು ಮನೆ ಸೇರಿಕೊಳ್ಳೋಣ ಆಮೇಲೆ ವಿಚಾರ ವಿಮರ್ಶೆಯಾಗಲಿ" ಎಂದರು. "ಬರುವ ವೇಳೆ ಮೀರಿದರೆ ನಡೆದೇ ಬರುವ ಹಪಹಪಿ ಬಿಟ್ಟು ಬಸ್ ಇಲ್ವೆ, ಆಟೋದಲ್ಲಿ ಬನ್ನಿ ಎಂದು ಎಷ್ಟು ಸಲ ಹೇಳಿಲ್ಲ? ನೀವಂತೂ ಗಂಭೀರ ಪರಿಸ್ಥಿತಿಯಲ್ಲೂ ಜಿಪುಣತನ ಬಿಡ್ಲಿಕ್ಕೆ ವಲ್ರಿ" ಎಂದು ಮೂದಲಿಸಿದೆ.

"ಮಾರಾಯ್ತಿ ಬಸ್ ಅಲ್ಲ ಆಟೋದಲ್ಲೇ ಬಂದಿದ್ದೇನೆ" ಎಂದಾಗ ನಂಬಲಾಗಲಿಲ್ಲ. "ಹಾಗಾದರೆ ಇಷ್ಟೊಂದು ವಿಳಂಬವೇಕೆ?" ಎಂದು ಹುಬ್ಬೇರಿಸಿ ವಿವರಣೆ ಕೇಳಿದೆ. "ನೀನು ಸಮಾಧಾನದಿಂದ ಕೇಳುವದಿದ್ದರೆ ಮಾತ್ರ ನಡೆದದ್ದನ್ನೆಲ್ಲ ಹೇಳುತ್ತೇನೆ" ಎಂದು ಖಚಿತವಾಗಿ ನುಡಿದಾಗ ಸುಮ್ಮನೆ ಇರಲೇಬೇಕಾಯಿತು.

"ನೀನು ಹೇಳಿದ ಅಪರೂಪದ ತಿಂಡಿ(!) ಖಚಿತವಾಗಿ ಸಿಗಬಹುದಾಗಿದ್ದ ಅಂಗಡಿ ರಜಾ ಎಂದು ಚೀಟಿ ಹೊತ್ತು ನಿಂತಿತ್ತು. ಅವನಜ್ಜಿ ಸ್ವರ್ಗಸ್ಥಳಾದಳಂತೆ. ಬೇರೆಲ್ಲಿ ಸಿಗಬಹುದು? ಎಂದು ಯೋಚಿಸುವಷ್ಟರಲ್ಲಿ ಬಿಸ್ಕತ್ತಿನ ಬ್ರಾಂಡ್ ಮರತೇ ಹೋಯ್ತು. ಯಾವುದೋ ಪಶು ಪ್ರಾಣಿಯ ಹೆಸರೆಂದು ಗೊತ್ತಿತ್ತು. ಒಂಟೆ, ಕುದುರೆ, ಸಿಂಹ, ಆನೆಗಳನ್ನು ಜ್ಞಾಪಿಸಿಕೊಂಡೆ. ಆದರೆ ಸರಿಯಾದ ಹೆಸರು ನಾಲಿಗೆಗೆ ಬರಲೇ ಇಲ್ಲ. ಅಯ್ಯಂಗಾರ್ ಬೇಕರಿಗೆ ಹೋಗಿ ಯಾವ ಬಿಸ್ಕತ್ತುಗಳು ಲಭ್ಯವಿವೆ? ಎಂದು ವಿಚಾರಿಸಿದೆ. ಖಾರಾ, ಮಸಾಲೆ, ಬೆಣ್ಣೆ ಸ್ಪೆಶಲ್ ಎಂದು ಹತ್ತಾರು ಹೆಸರು ಹೇಳಿದ. ಅದರಲ್ಲಿ ಪಶು, ಪ್ರಾಣಿಯ ಹೆಸರಿನದು ಒಂದೂ ಇಲ್ಲದ್ದರಿಂದ ನಿರಾಸೆಯಾಯಿತು. ಯಾವದು ಕೊಡ್ಲಿ ಸಾರ್? ಎಂದಾಗ ಗೊಂದಲಕ್ಕಿಟ್ಟುಕೊಂಡಿತು. 'ಯಾವುದು ಫ್ರೆಶ್ ಆಗಿದೆ?' ಎಂದಾಗ

'ಎಲ್ಲವೂ ಈಗ್ತಾನೆ ರೋಸ್ಟ್ ಆಗಿ ಬಂದಿವೆ.' ಪ್ರತ್ಯುತ್ತರ ಬಂದಿತು. "ಮನೇವರ್ನ ವಿಚಾರಿಸ್ತಿನಿ. ಈಗ ಬರ್ತಾರೆ" ಎಂದು ಹುಸಿ ಆಶ್ವಾಸನೆ ಇತ್ತು ಹೊರಟೆ.

ಹೊಸದಾಗಿ ತಲೆ ಎತ್ತಿದ 'ಡಿಪಾರ್ಟ್‌ಮೆಂಟಲ್ ಸ್ಟೋರ್' ಕಣ್ಣಿಗೆ ಬಿತ್ತು. ಅಲ್ಲಿ ಸಿಕ್ಕೇ ಸಿಗುತ್ತದೆಂಬ ನಂಬಿಕೆಯಿಂದ ಒಳಗೆ ಕಾಲಿಡುತ್ತಿದ್ದಂತೆ, ಕಣ್ಣಿಗೆ ಕಾಡಿಗೆ, ತುಟಿಗೆ ಕೆಂಪು, ತಲೆಗೆ ಕಂದು ಬಣ್ಣ ಹಾಕಿದ ಪಾರದರ್ಶಕ ಉಡಿಗೆಯುಟ್ಟ ಯುವತಿ ಸುಸ್ವಾಗತ ಕೋರಿ, "ತಮಗೇನು ಸೇವೆ ಸಲ್ಲಿಸಲಿ?" ಎಂದು ದೇಶೀ ಇಂಗ್ಲಿಷಿನಲ್ಲಿ ವಿಚಾರಿಸಿದಳು. "ಪ್ರಾಣಿಯ ಹೆಸರಿನ ಬಿಸ್ಕತ್ತು ಯಾವುದಾದರೂ ಇದೆಯಾ? ಎಂದು ಕೇಳಿದೆ "ಯಾಕಿಲ್ಲ ಸಾರ್. ನಿಮ್ಮ ನಾಯಿ ಯಾವ ಜಾತಿಯದು ಸಾರ್? ಅದಕ್ಕೆ ಬೇಕಾಗುವ ಬೋನ್ ಶೇಪ್ (ಎಲುವಿನ ಆಕಾರ) ಸ್ಟೀಕ್ ಫ್ಲೇವರ್ (ಮಾಂಸದ ರುಚಿ), ಕಿಡ್ನಿ ಐಸಿಂಗ್ (ಯಕೃತ್ತಿನ ಅಲಂಕಾರ)ದ 'ಡಾಗ್ ಬಿಸ್ಕೇಟ್' ಎಲ್ಲ ವೆರೈಟಿ ಇದೆ. ನೇಮ್ ಇಟ್, ಯು ವಿಲ್ ಹ್ಯಾವ್ ಇಟ್" ಎಂದು ಇಂಗ್ಲಿಷ್ ಕೊಚ್ಚಿದಳು. ಇದು 'ಶ್ವಾನ ಸಪ್ತಾಹ' ವಿಶೇಷ ರಿಯಾಯ್ತಿ ಬೇರೆ ಇದೆ ಎಂಬ ಆಶ್ವಾಸನೆ ಬೇರೆ ಬಂದಿತು. "ಓ ಗಾಡ್, ನಾಯಿಯನ್ನೇ ಕೇಳಬೇಕಿತ್ತು. ಇಲ್ಲ ಕರೆತರಬೇಕಿತ್ತು' ಎನ್ನುತ್ತ ಅಲ್ಲಿಂದ ಹೊರಬಿದ್ದೆ." ರಾಯರು ಒಂದು ಕ್ಷಣ ಸುಮ್ಮನಾದರು.

'ಮನೆಯ ನಾಯಿ'ಯ ಸೂಚ್ಯ ಉಲ್ಲೇಖದಿಂದ ಕೆರಳಿದೆ. ಆದರೆ ರಾಯರ ಮುಂದಿನ ಮಾತಿನಿಂದ ಸಿಟ್ಟು ಝರ್‍ರನೆ ಇಳಿಯಿತು.

"ನನ್ನವಳಿಗೆ ನಾಯಿ ಎಂದರೆ ಅತೀವ ಪ್ರೀತಿ ಇದ್ದರೂ ಅವಳು ಹೇಳಿದ ಬಿಸ್ಕೀಟಿನ ಹೆಸರು ಬೆಕ್ಕಿನ ಜಾತಿಯ ವರ್ಗಕ್ಕೆ ಸೇರಿದ್ದು ಎಂದು ಥಟ್ಟನೆ ನೆನಪಾಯ್ತು. ಅಂದರೆ ಥೇಟ್ ಅವಳ ಜಾತಿಯದು ಅಂದರೆ ಹುಲಿ ಹುಲಿಛಾಪ್ ಇರಬೇಕು! ಆದರೆ ಈ ಹುಲಿ ಯಾವ ವರ್ಗದ್ದು? ಪುನಃ ಗೊಂದಲವಾಯ್ತು. ಪಟ್ಟೆ ಹುಲಿ, ಚಿಟ್ಟೆ ಹುಲಿ, ಬಂಗಾಲ ಹುಲಿ, ಹೆಬ್ಬುಲಿ ಈ ಪ್ರಭೇದಗಳಲ್ಲಿ ಯಾವುದು? ಇವೆಲ್ಲಾ 'ಟಾಯ್‌ಗ್ರೀನಾ' ವರ್ಗಕ್ಕೆ ಸೇರಿದವುಗಳು ಎಂದು ನೆನಪಿಸಿಕೊಳ್ಳುತ್ತಿದ್ದಂತೆ, ನನ್ನವಳು ಹೇಳಿದ್ದು 'ಟೈಗರ್ ಬ್ರಾಂಡ್' ಎಂದು ಒಮ್ಮೆಲೇ ಬೆಳಕು ಬಿತ್ತು. ಹತ್ತಿರದ ಕಿರಾಣಿ ಅಂಗಡಿಯವನಿಗೆ "ಈ ಬಿಸ್ಕೀಟ್ ಇದೆಯಾ?" ಎಂದು ವಿಚಾರಿಸಿದಾಗ "ನಾವು ಪಾರ್ಲೆ ಕಂಪನಿಯ ಏಜೆನ್ಸಿ ಪಡೆದಿದ್ದೇವೆ. ಬ್ರಿಟಾನಿಯ ಮಾರುವಂತಿಲ್ಲ. ಆದರೆ ನಮ್ಮದಕ್ಕೂ ಆ ಬ್ರಾಂಡಿಗೂ ರುಚಿಯಲ್ಲಿ ವ್ಯತ್ಯಾಸವಿಲ್ಲ" ಎಂದು ಹೇಳಿ ಆತ ಬೇರೆ ಕೆಲಸದಲ್ಲಿ ಮೈಮರೆತ. ಮಲ್ಲೇಶ್ವರಂನಲ್ಲಿ ಬ್ರಿಟಾನಿಯ ಕಂಪನಿ ಮಾರಾಟಗಾರರು ಯಾರು? ಎಂದು ಪತ್ತೆ ಹಚ್ಚುವುದರಲ್ಲಿ ಇನ್ನರ್ಧ ಗಂಟೆ ಕಳೆಯಿತು. ಒಂದೆಡೆ ವಿಚಾರಿಸಿದಾಗ "ಇದ್ದ ಕೊನೆ ಪಾಕೆಟ್ ಇದೀಗ ಕೊಟ್ಟು ಬಿಟ್ಟೆ" ಎಂದು ಉತ್ತರ ಸಿಕ್ಕಿತು. "ಬೇರೆಲ್ಲಿ ಸಿಗಬಹುದು?" ಎಂದು ಕೇಳಿದಾಗ ಪತ್ನಿಯಂತೆಯೇ 'ಎಲ್ಲ ಕಡೆಗೆ ಸಿಗುತ್ತದೆ' ಎನ್ನಬೇಕೆ? ಅಲ್ಲಿಂದ ಮುಂದೆ ಸಾಲಾಗಿ ನಿಂತ ಪಾತ್ರೆ, ಬಳೆ, ಬಟ್ಟೆಬರೆ, ಕುಂಕುಮದಂಗಡಿಗಳಲ್ಲೆಲ್ಲ ವಿಚಾರಿಸಿದರೆ ಮುಂದೆ ಹೋಗಿ ಎಂದು ಕೈ ತೊಳೆದುಕೊಂಡು ಬಿಡುತ್ತಿದ್ದರು. ಕೊನೆಗೊಮ್ಮೆ ಕಡ್ಲೆಪುರಿಯಂಗಡಿಯಲ್ಲಿ ಕೇಳಿದಾಗ, ಮೊಮ್ಮಗಳಿಗೆಂದೋ ಏನೋ ಎಂದೋ ಕೊಂಡಿಟ್ಟ ಬಿಸ್ಕಿಟ್ ಪ್ಯಾಕ್ ತೆಗೆದು ಧೂಳು ಜಾಡಿಸಿ ಕೈಗಿತ್ತು ಕೇವಲ ಮೂರು ರೂಪಾಯಿ ಪಡೆದ. ಇಷ್ಟೆಲ್ಲ ಹರಿಕಥೆ ಮುಗಿಸುವುದರಲ್ಲಿ ವೇಳೆ ಜಾರಿದ್ದೇ ತಿಳಿಯದ್ದರಿಂದ ಆಟೋರಿಕ್ಷಾಗೆ ಶರಣು ಹೋಗಬೇಕಾಯಿತು. ಅದು ವೇಗವಾಗಿ ಮನೆಯತ್ತ ಧಾವಿಸುವಾಗ ಸಂಜೀವಿನಿ ಹೊತ್ತು ತಂದ ಆಂಜನೇಯನ ಅಭಿಮಾನ ನನ್ನದಾಗಿತ್ತು!" ಎಂದು ತುಂಟ ನಗೆ ಬೀರಿದರು. ರಾಯರ ಕಲ್ಪನಾ ವಿಲಾಸದ ಕಥಾಮೃತ ಶ್ರವಣ ಸಂಭ್ರಮದಲ್ಲಿ ಕೋಪ ಮಾಡಲು ಎಡೆಯುಂಟೆ? ■

# ಚಟ್ನಿಪುಡಿ ಪುರಾಣ

ಕೆಲತಿಂಗಳ ಹಿಂದೆ, ಇದ್ದಕ್ಕಿದ್ದಂತೆ ತೆಂಗಿನಕಾಯಿಗಳ ದರ ವಿಪರೀತ ಏರಿತು. ಕರಾವಳಿಯವರಾದ ನಮಗೆ ದಿನಕ್ಕೆರಡು ಕಾಯಿ ಒಡೆಯದೇ ಬೆಳಗಾಗುವದುಂಟೇ? ತುಂಬ ಕಷ್ಟಪಟ್ಟು ಈಗ ಅದನ್ನು 'ದಿನಕ್ಕೆ ಒಂದೇ!' ತಂದು ನಿಲ್ಲಿಸಿದ್ದೆ. ಈಗ ಅದಕ್ಕೂ ಸಂಚಕಾರ ಬಂತೇ ಎಂದು ಮರುಗುವಂತೆ ಆಯ್ತು. "ಯಾಕ್ರಿ, ಅಷ್ಟು ಕೊಬ್ಬರಿ ತಿಂತೀರಿ? ಕೊಲೈಸ್ಟೆರಲ್ ಜಾಸ್ತಿ ಅಲ್ವೆನ್ರಿ? ಹೃದಯಾಘಾತ, ರಕ್ತದೊತ್ತಡಗಳಿಗೆಲ್ಲ ಆಮಂತ್ರಣ ಕೊಡ್ತಾ ಇದ್ದೀರಿ!" ಎಂದು ಆರೋಗ್ಯ, ಆಹಾರಗಳತ್ತ ವಿಶೇಷ ಲಕ್ಷ್ಯ ಪೂರೈಸುತ್ತಿದ್ದ ಹಿತೈಷಿಗಳು ಎಚ್ಚರಿಸುತ್ತಲೇ ಇದ್ದರೂ, ತೆಂಗಿನಕಾಯಿಯ ಉಪಯೋಗ ಕಡಿಮೆ ಮಾಡುವ ಉಪಾಯದ ಬಗ್ಗೆ ತಲೆ ಕೆಡಿಸಿಕೊಂಡಿರಲಿಲ್ಲ, ಕಾರಣ, 'ರಾಯರೆಕಾನಮಿಕ್ಸ'ದಲ್ಲಿ ತೆಂಗಿನಕಾಯಿ ದರ ಏರಿಕೆಯ ಬಿಸಿ ನಮಗೆ ತಟ್ಟಿರಲಿಲ್ಲ!

ಸೀಳಿದ ತಾಜಾ ತೆಂಗಿನಕಾಯಿಗಳು ಕಡಿಮೆ ಬೆಲೆಗೆ ದೊರೆಯುವವೆಂದು ಪತ್ತೆ ಹಚ್ಚಿದರು. ಎಂದಿನಂತೆಯೇ ತೆಂಗಿನಕಾಯಿಗಳು ಮನೆಗೆ ಬರಲಾರಂಭಿಸಿದವು. ಅವನ್ನು ತಂದೊಡನೆ ಭೂತಗನ್ನಡಿ ಹಿಡಿದು ಸೀಳಿದ ಸ್ಥಳವನ್ನು ಪರಿಶೀಲಿಸುವರು. ಡ್ಯಾಮೇಜಿನ ಅಂದಾಜು ಮಾಡುವರು. ಸೀಳು ಹೆಚ್ಚಿಗೆ ಇದ್ದಲ್ಲಿ, ಸೆಲ್ಲೋಟೇಪ್ ಹಚ್ಚಿ ರಿಪೇರಿ ಮಾಡುವರು. ಎರಡರಿಂದ ನಾಲ್ಕುದಿನ, ಕಾಯಿಗಳ ಆಯುಷ್ಯ ಹೆಚ್ಚುವಂತೆ ನೋಡಿಕೊಳ್ಳುವರು. ಯಾವ ಕಾಯಿ, ಚಟ್ನಿ–ಕೋಸಂಬರಿಗೆ ಲಾಯಕು, ಯಾವುದನ್ನು ಪಲ್ಯ ಹುಳಿಗಳಿಗೆ ರುಚಿ ಕೆಡದಂತೆ ಬಳಸಬಹುದು? ಯಾವುದನ್ನು ಆಗಿಂದಾಗ್ಗೆ ಒಡೆದು ಉಪಯೋಗಿಸುವದು? ಉಳಿದರ್ಧವನ್ನು ಬಿಸಿಲಿಗಿಟ್ಟು ಹೇಗೆ ಬೂಷ್ಟು ಬರದಂತೆ ಕಾಯ್ದಿರಿಸುವದು? ಎಂದೆಲ್ಲ ನಿರ್ದೇಶನ ಕೊಡುವರು. ಇದರಿಂದಾಗಿ ನಾವು ಕಾಯಿ ತಿನ್ನುವ ಪ್ರಮಾಣ ಹೆಚ್ಚಾಯಿತೇ ಹೊರತು ನಾನು ಯೋಜಿಸಿದಂತೆ ತೆಂಗಿನಕಾಯಿ ಬಳಕೆಯೇನೂ ಕಡಿಮೆಯಾಗಲಿಲ್ಲ!

ಒಮ್ಮೆ ಮಾತ್ರ ಇವರು ಆರಿಸಿದ ಸೀಳಿದ ತೆಂಗಿನಕಾಯಿ ತಂದು ಒಡೆದಾಗ ಬೇಸ್ತು ಬಿದ್ದರು. ಹೊರಗಿನಿಂದ ಸರಿಯಾಗಿಯೇ ಕಾಣುತ್ತಿತ್ತು ಅದು ದೊಡ್ಡಕಾಯಿ. ಒಳಗೆ ದಪ್ಪ ಕೊಬ್ಬರಿ. ಅಂಚಿಗೆ ಹೊಂದಿ ಕಪ್ಪು ಬೂಷ್ಟು ಬಂದಿತ್ತು. ನೀರು ಮಾತ್ರ ಕೆಟ್ಟು ಹೋಗಿತ್ತು. ಏನು ಮಾಡುವದೆಂದು ಯೋಚಿಸುತ್ತಿದ್ದಾಗ, ರಾಯರು ಕಾರ್ಯೋನ್ಮುಖಿಯಾದರು. ಹರಿತಾದ ಚಾಕುವಿನಿಂದ ತೆಂಗಿನ ಹೋಳುಗಳ 'ಫಂಗಸ್' ಹತ್ತಿದ ಭಾಗವನ್ನು ಕೆರೆಕೆರೆದು ತೆಗೆದರು. ಚೆನ್ನಾಗಿ ತೊಳೆದು ಬಿಸಿಲಲ್ಲಿ ಒಣಗಿಸಿದರು. ಸಾಯಂಕಾಲ ಎರಡೂ ಹೋಳುಗಳನ್ನು ಕೈಗಿತ್ತು "ನೋಡು! ಎಷ್ಟು ತಾಜಾ ಆಗಿವೆ. ಈಗ ಇದರ ಉಪಯೋಗ ನಿನಗೆ ಬಿಟ್ಟದ್ದು! ಇಲ್ಲವಾದರೆ ನನಗೆ ಕಟ್ಟಿಟ್ಟದ್ದು!" ಎಂದರು.

ಮೂಸಿ ನೋಡಿದೆ. ಚೂರು ಬಾಯಿಗೆ ಹಾಕಿದೆ. ಹಳಸಿದ ವಾಸನೆಯಿರಲಿಲ್ಲ. ದೊಡ್ಡಕಾಯಿ. ಒಳ್ಳೆ ವ್ಯಂಜನವಾಗಬೇಕು ಕಾಯ್ದಿರಿಸುವಂಥದು ಆಗಬೇಕು. ಪಾಕಪರಿಣತ, ರಾಯರೆದರು ಸೋಲೊಪ್ಪಿಕೊಳ್ಳಲು ಮನಸ್ಸಾಗಲಿಲ್ಲ. ಯೋಚಿಸುತ್ತಿದ್ದಂತೆ ಅಜ್ಜಿಯ

ಬೆಳ್ಳುಳ್ಳಿ ಚಟ್ನಿಪುಡಿ ಜ್ಞಾಪಕಕ್ಕೆ ಬಂತು.

ಕೂಡಲೆ ಇಡೀ ಕಾಯಿಯನ್ನು ತುರಿದೆ. ಹೆಂಚಿನ ಮೇಲೆ ಮಂದಾಗ್ನಿಯ ಮೇಲೆ ತುರಿಯನ್ನೆಲ್ಲ 'ಗಂ' ಅನಿಸುವಂತೆ ಹುರಿದೆ. ಉಪ್ಪು, ಕಾರ, ಮಾವಿನಹುಳಿ ಪುಡಿ, ಹುರಿದ ಎಳ್ಳು, ಬೆಳ್ಳುಳ್ಳಿ ಸೇರಿಸಿ ಚಟ್ನಿಪುಡಿ ಮಾಡಿದೆ. ಅದು ಎಷ್ಟು ರುಚಿಯಾಗಿತ್ತೆಂದರೆ, ಚಟ್ನಿಪುಡಿಯನ್ನು ಕಣ್ಣೆತ್ತಿ ನೋಡದ ರಾಯರು, ಎಂದೂ, ನನ್ನ ಯಾವುದೇ ಅಡಿಗೆ ರುಚಿಯಾಗಿದೆ ಎನ್ನದವರು, 'ಚಪ್ಪರಿಸಿ ತಿಂದರು'. "ನೋಡಿದೆಯಾ! ಆರಿಸಿ ತಂದ ಸೀಳಿದ, ಅಳಿವಿನ ಹಾದಿಯಲ್ಲಿದ್ದ, ಕಾಯಿಯಲ್ಲಿ ಸತ್ವ ಕಾಣಲು ಬುದ್ಧಿಬೇಕು! ದಿನವಿಡೀ ಬಾಲ್ಕನಿಯಲ್ಲಿ ಬಿದ್ದು ಪೋಲಾಗುತ್ತಿರುವ ಬಿಟ್ಟಿ ಬಿಸಿಲಲ್ಲಿ ಕಾಯಿ ಒಣಗಿಸಲು ಸಹನೆಬೇಕು" ಎಂದು ತಾನೇ ಶಾಭಾಸ್‌ಗಿರಿ ಪಡೆಯಲು ಹವಣಿಸುತ್ತಿದ್ದಾಗ, "ರುಚಿಯಾದ ಚಟ್ನಿಪುಡಿ



ಮಾಡಲು ಕೈಹದಬೇಕು!"....ಎಂದು ವಾಕ್ಯವನ್ನು ಮುಗಿಸಿ ಚಟ್ನಿಪುಡಿಯ ಕ್ರೆಡಿಟ್, ನನಗೆ ಬರುವಂತೆ ನೋಡಿಕೊಂಡೆ.

"ಆಯ್ತು ಮಾರಾಯ್ತಿ! ನೀನೂ 'ಪಾಕಿ' ಎಂದು ತೋರಿಸಿಕೊಂಡೆ! ಈ ಹೊಸ ರೆಸಿಪಿಯನ್ನು 'ಕೆಳದಿ'ಯೊಂದಿಗೆ ಹಂಚಿಕೊಳ್ಳಬಹುದಲ್ಲ?" ಪುಕ್ಕಟೆ ಸಲಹೆ ಇತ್ತರು.

ನನ್ನ ಸ್ನೇಹಿತೆ ಸೂರ್ಯಮತಿ, ಮಹಿಳೆಯರಿಗಾಗಿ 'ಕನಸಿನಕೆಳದಿ' ಎಂಬ ಮಾಸಪತ್ರಿಕೆಯನ್ನು ನಡೆಸುತ್ತಾಳೆ. 'ಹೊಸ ರುಚಿ'ಗಾಗಿ ಬರೆದು ಕಳಿಸುವಂತೆ ಒಂದೇ ಸಮನೆ ಪೀಡಿಸುತ್ತಿದ್ದರಿಂದ, ಬಾಳೆ ಹಣ್ಣಿನ ರೊಟ್ಟಿ, ನುಗ್ಗೆ ಎಲೆಯ ಪಲ್ಯ, ಹಾಗಲಕಾಯಿ ಉಪ್ಪಿನಕಾಯಿಗಳಂಥವನ್ನು ಬರೆದು ಕಳಿಸಿದ್ದೆ. ಅವು ಪ್ರಕಟವಾಗಿಯೂ ಇದ್ದವು. ಆದ್ದರಿಂದ ಉತ್ಸಾಹಗೊಂಡು, 'ಹಾಳಾಗಲಿದ್ದ ತೆಂಗಿನ ಚಟ್ನಿಪುಡಿ' ವ್ಯಂಜನ ಬರೆದೆ. ಬಿಡದೇ ರಾಯರ ಬೆನ್ನು ಹತ್ತಿ, ಮತ್ತೊಮ್ಮೆ ಅಂಥದೇ ಬಲಿತ ಒಳ್ಳೆಯ ತೆಂಗಿನ ಕಾಯಿ ತರಿಸಿ, ಹೋಳುಗಳ ಫೋಟೊ ತೆಗೆಸಿ, ಕಪ್ಪುಪ್ಲೇಟಿನ ಮೇಲೆ, ಬೆಳ್ಳಗಿನ ಅಕ್ಕಿ ರೊಟ್ಟಿಯ ಮೇಲೆ ಕಂದು, ಕೆಂಪು ಬಣ್ಣದ ಚಟ್ನಿಪುಡಿ, ಬೆಣ್ಣೆಗಳನ್ನು ಓರಣವಾಗಿ ಜೋಡಿಸಿದೆ. ರಾಯರು ತಾವೇ ಬೆಳೆದ ಕೇಸರಿ ಚೆಂಡು ಹೂಗಳನ್ನು ಅಲಂಕಾರವಾಗಿ ಜೋಡಿಸಿದರು. ನಂತರ ಅವರು ತೆಗೆದ ಛಾಯಾಚಿತ್ರ 'ಕನಸಿನ ಕೆಳದಿ'ಯ ಮುಖಪುಟವಾಗಿಯೇ ಅಚ್ಚಾಗಬೇಕೇ? ಒಳಗಡೆ ಇನ್ನೊಂದು ಚಿತ್ರದೊಂದಿಗೆ ಚಟ್ನಿಪುಡಿ ಪ್ರಕಾರ ಪ್ರಕಟವಾಗಿತ್ತು.

ಮಧ್ಯಾಹ್ನ ಊಟಮುಗಿಸಿ ಮಲಗಿದ್ದೆನಷ್ಟೆ!

ಟ್ರಿನ್ ಟ್ರಿನ್ ಫೋನು ಕಿರುಚಿತು. "ನಾನು ಆಂಟಿ, ಸೀಮಾ! ಇವತ್ತು ನೆರೆಮನೆಯ ಚಂಪಾ, ಕನ್ನಡ ಮ್ಯಾಗಝಿನ್‌ದಲ್ಲಿ ನಿಮ್ಮ ರೆಸಿಪಿ ಬಂದಿದೆ ಅಂತಾ ಹೇಳಿದ್ಲು. ಊರಿಂದ ಬಂದ ಕಾಯಿ ಬಿಸಾಕದೇ ಇಟ್ಟಿದೀನಿ! ನಂಗೆ ಕನ್ನಡ ಬರೋಲ್ಲ! ಚಟ್ನಿಪುಡಿ ಹೇಗೆ ಮಾಡೋದು ಇಂಗ್ಲಿಷಿನಲ್ಲಿ ಹೇಳ್ತಿರಾ ಪ್ಲೀಸ್!" ರಾಗ ಎಳೆದಳು. ಫೋನಿನಲ್ಲಿ ಇಂಗ್ಲಿಷಿನಲ್ಲಿ ರೆಸಿಪಿ ಪಡೆದು, ಆಕೆ ಬರೆದು ಮುಗಿಸಿಕೊಳ್ಳುವದರಲ್ಲಿ ಇಪ್ಪತ್ತು ನಿಮಿಷದ ಅವಧಿ ದಾಟಿತ್ತು; ನನ್ನ ನಿದ್ರೆ ಹಾರಿಹೋಗಿತ್ತು!

ಮರುದಿನ ಮಧ್ಯಾಹ್ನ ಶಾಲಾ ಸ್ನೇಹಿತೆ ಉಜ್ವಲಾ, ಪ್ಲಾಸ್ಟಿಕ್ ಚೀಲವೊಂದನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಹಾಜರಾದಳು. "ಅದೇನೋ ತೆಂಗಿನಕಾಯಿ ಚಟ್ನಿಪುಡಿ ಮಾಡೋದನ್ನ ಬಾಯಿಗೆ ನೀರು ಬರೋ ಹಾಗೆ ವರ್ಣಿಸಿ ಬರೆದಿದ್ದೀ! ಎಂದು ಪಕ್ಕದ್ಮನೆ ಅನ್ನಪೂರ್ಣಮ್ಮ ಹೇಳಿದ್ರು, ಅವರ ಮನೆ ಪತ್ರಿಕೆ ತಂದು ಓದ್ಲಿಕ್ಕೆ ಪುರುಸೊತ್ತಾಗಲಿಲ್ಲ!... ನೀನಂತೂ ಮಧ್ಯಾಹ್ನ ಸಾಯಂಕಾಲ ಫ್ರೀನೆ ಇರ್ತಿಯಾ! ವೇಳೆ ಕಳೆಯೋದು ಕಷ್ಟ ಅಲ್ವೆ? ಕಂಪನಿ ಕೊಡೋಣಾಂತ ಬಂದೆ. ಹಾಗೇ ಆ ಚಟ್ನಿಪುಡಿ ಮಾಡೋದನ್ನೂ ಕಲಿತುಕೊಂಡ ಹಾಗಾಯ್ತು!" ಎಂದು ನನ್ನ ಉತ್ತರಕ್ಕಾಗಿಯೂ ಕಾಯದೇ, ಅಡಿಗೆಮನೆ ಹೊಕ್ಕು, ಈಳಿಗೆ ತಟ್ಟೆಯಿಟ್ಟುಕೊಂಡು ಭರ್ ಭರ್ ಕಾಯಿ ತುರಿಯಲಾರಂಭಿಸಿದಳು. "ನಾವು ಬೆಳ್ಳುಳ್ಳಿ ತಿನ್ನೋದಿಲ್ಲಪ್ಪ! ಬದಲಿಗೆ ಏನು ಹಾಕ್ತೀಯಾ?" ಎಂದು ವಿಚಾರಿಸಿ ಕರಿಬೇವು ಇಂಗು ಹಾಕಿದರೆ ನಡೆಯುತ್ತದೆಂದು ತಿಳಿದುಕೊಂಡು, ನನ್ನಿಂದಲೇ ಎಲ್ಲ ಸಾಮಾನುಗಳನ್ನು ಹುರಿಸಿ, ಮಿಕ್ಸಿಗೆ ಹಾಕಿಸಿಕೊಂಡು, ತಾನು ಚಟ್ನಿ ಮಾಡಿದಳು. ಜೊತೆಗೆ ತನ್ನ ಮಾತುಗಳಿಂದ ಮಧ್ಯಾಹ್ನದ ಮನರಂಜನೆ ಒದಗಿಸಿ, ಕಾಫಿ ಕುಡಿದು, ಥ್ಯಾಂಕ್ಸ್ ಹೇಳಿ ಹೊರಬಿದ್ದಳು.

ಕೊಂಚ ಹೊತ್ತಿಗೆ, ನೆರೆಮನೆಯ ರಶ್ಮಿ ಬಂದಳು. "ಆಂಟಿ, ನಿಮ್ಮ ಕೊಂಕಣಿ, ಚಟ್ಟಣಿ ಕೊಡಿ! ಸ್ಯಾಂಡ್‌ವಿಚ್‌ಗೆ ತುಂಬಾ ಚೆನ್ನಾಗಿರುತ್ತದೆ. ನಾಲ್ಕು ಜನ ಫ್ರೆಂಡ್ಸ್ ಬೇರೆ ಬಂದಿದಾರೆ!"

ಎಂದು ಎಂದಿಗಿಂತ ಕೊಂಚ ಹೆಚ್ಚೇ ಒಯ್ದಳು. ಮೊದಲ ಬಾರಿಯೇ ಅದರ ರುಚಿಗೆ ಮನಸೋತ ರಶ್ಮಿ, ಪ್ರತಿ ಸಲ ಚಟ್ನಿಪುಡಿ ಮಾಡಿದಾಗ ಒಯ್ಯುವ ರೂಢಿ ಇಟ್ಟುಕೊಂಡಿದ್ದಾಳೆ.

ಮರುದಿನ ಎಂಟುಗಂಟೆಗೇ ಡೋರ್‌ಬೆಲ್ ಬಾರಿಸಿತು. ಅಪರಿಚಿತ ತರುಣಿಯೋರ್ವಳು ಕೈಯಲ್ಲಿ ತೆಂಗಿನ ಹೋಳುಗಳನ್ನು ಹಿಡಿದು ನಿಂತಿದ್ದಳು. "ಮ್ಯಾಡಂ, ಕ್ಷಮಿಸಿ! ನನ್ನ ಹೆಸರು ಮಲ್ಲಿಕಾ, 'ನಿಮಿಷದಲ್ಲಿ ಅಡಿಗೆ' ಎಂಬ ಕ್ವಿಕ್ ರೆಸಿಪಿಗಳ ಕ್ಲಾಸ್ ಶುರುಮಾಡಿದೀನಿ. ನೀವು ಚಟ್ನಿಪುಡಿ ಎಕ್ಸ್‌ಪರ್ಟ್ ಅಂತೆ! ಇದನ್ನು ಈಗ ಮಾಡಿ ತೋರ್ಸಿದ್ರೆ ಕಣ್ಣಿಟ್ಟು ನೋಡಿ ಕಲ್ತುಬಿಡ್ತೀನಿ. ಆಮೇಲೆ ಕ್ಲಾಸಿನಲ್ಲಿ ಸರಾಗವಾಗಿ ಕಲಿಸಬಹುದು. ತೊಂದರೆ ಇಲ್ಲತಾನೇ?" ಪ್ರಾರ್ಥನೆಯ ದನಿಯಲ್ಲಿ ಕೇಳಿದಳು.

ನನ್ನ ಪಾಕ ಪರಿಣತಿಯ ಪ್ರಚಾರ, ಇಷ್ಟೊಂದು ಶೀಘ್ರವಾಗಿ, ವ್ಯಾಪಕವಾಗಿ ಆಗುತ್ತದೆಯೆಂದು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ! ಆ ಸಂತೋಷದಲ್ಲಿ ಬೆಳಗಿನ ಒಂದೂವರೆ ಗಂಟೆಯ ಸಮಯವನ್ನು ಲೆಕ್ಚರ್-ಕಂ-ಡೆಮಾಂಸ್ಟ್ರೇಷನ್ನಲ್ಲಿ ಕಳೆದೆ. 'ಕ್ವಿಕ್' ಶಿಕ್ಷಕಿಗೆ ಪಕ್ಕಾ ಮಾಹಿತಿ ಕೊಡುವದರಲ್ಲಿ ಸಫಲಳಾದೆ. ಆಕೆ ಚಟ್ನಿಪುಡಿಯನ್ನು ಅಂದವಾಗಿ ಪೊಟ್ಟಣ ಕಟ್ಟಿ, ತಾನು ತಂದ ಜಂಬದ ಚೀಲದಲ್ಲಿಟ್ಟಳು. ಕೃತಜ್ಞತೆ ಹೇಳಲು ಮರೆಯದಿದ್ದರೂ, ತನ್ನ ಪೂರ್ಣ ವಿಳಾಸ, ಕ್ಲಾಸು ಎಲ್ಲಿ? ವಿದ್ಯಾರ್ಥಿಗಳು ಯಾರು? ಎಂದೆಲ್ಲ ಹೇಳಲು ಮರೆತಿದ್ದಳು!.

ಸಾಯಂಕಾಲದ ತಿರುಗಾಟ ಮುಗಿಸಿ, ಮನೆಗೆ ಬಂದು ಬೀಗ ತೆಗೆಯುವಾಗ, ಒಂದು ಆಮಂತ್ರಣ ಪತ್ರಿಕೆ ಹಾಗೂ ಚೀಟಿಗಳು ಸಿಕ್ಕವು.

"ಸನ್ಮಾನ್ಯರೇ,

ನಾವು 'ಹಿತ-ಮಿತ' ಬಳಗದ ಸದಸ್ಯರು. ಸಮಾಜಸೇವೆಯನ್ನೆ ಗುರಿಯಾಗಿ ಇಟ್ಟು ಕೊಂಡಿದ್ದೇವೆ. ಮಲ್ಲೇಶ್ವರಂ....ನೇ ಕ್ರಾಸಿನಲ್ಲಿ ಬಹುಮಹಡಿ ನೋಡಿರುವಿರಲ್ಲ? ಅದರ ಪಕ್ಕದ ಕಟ್ಟಡದ 13ನೇ ನಂ. ಫ್ಲ್ಯಾಟಿನಲ್ಲೇ ನಮ್ಮ ಬಳಗ ವಾರಕ್ಕೆರಡು ಬಾರಿ ಸೇರುತ್ತದೆ. ಪ್ರತಿಬಾರಿಯೂ ಹೊಸಬರನ್ನು ಆದರದಿಂದ ಬರಮಾಡಿಕೊಂಡು ಅವರಿಂದ ಹೊಸಖಾದ್ಯ ಸಿದ್ಧಮಾಡಿಸಿ ಎಲ್ಲರೂ ಸಾಮೂಹಿಕವಾಗಿ ರುಚಿನೋಡಿ ಪ್ರೋತ್ಸಾಹಿಸುವದು, ನಮ್ಮಲ್ಲಿ ನಡೆದು ಬಂದ ಪದ್ಧತಿ. ಈ ರವಿವಾರ, ತಾವು ತಮ್ಮ ಪ್ರಸಿದ್ಧ ಚಟ್ನಿಪುಡಿಯನ್ನು ತಯಾರಿಸಿ ತೋರಿಸಿ ನಮ್ಮ ಸಾಮೂಹಿಕ ಆನಂದದಲ್ಲಿ ಪಾಲುಗೊಳ್ಳಬೇಕಾಗಿ ವಿನಂತಿ. ನಾವಾಗಿ ಬರುವ ರವಿವಾರ ಬೆಳಿಗ್ಗೆ 9 ಗಂಟೆಗೆ ಕರೆಯಲು ಬರುತ್ತೇವೆ. ಚಟ್ನಿಪುಡಿ ಪರಿಕರಗಳನ್ನೆಲ್ಲ ಸಿದ್ಧವಾಗಿಡಬೇಕಾಗಿ ಪ್ರಾರ್ಥನೆ. ಸಮಾಜದ ಹಿತವನ್ನು ಗಮನಿಸುವವರಾಗಿರುತ್ತೀರಲ್ಲವೆ?

ಸಹಕಾರ ಕೋರುವ

ಹಿತ-ಮಿತ ಬಳಗ.

*ವಿ.ಸೂ:- ನಮ್ಮಲ್ಲಿ ಸ್ತ್ರೀ-ಪುರುಷಭೇದವಿಲ್ಲ! ಪಾಕಕೋವಿದ ಗಂಡಸರನ್ನೂ ಬರಮಾಡಿಕೊಳ್ಳುತ್ತೇವೆ. ನಿಮ್ಮಲ್ಲಿ ಗಂಡಸರು ಅಡಿಗೆ ಬಲ್ಲವರಿದ್ದಲ್ಲಿ ಅವರಿಗೂ ಮುಕ್ತಪ್ರವೇಶ. ಮನೆಗೆ ಬೀಗ ನೋಡಿ ನಿರಾಸೆಯಾಗಿದೆ....ಇತ್ಯಾದಿ.*

ಶನಿವಾರ ಸಂಜೆ 'ಹಿತಮಿತ'ದ ಫೋನು ಕಿರುಚಿಕೊಂಡಿತು. ಸ್ತ್ರೀಪುರುಷ ಸಮಾನತೆಯನ್ನು ತನ್ನದೇ ವೈಶಿಷ್ಟ್ಯಪೂರ್ಣ ರೀತಿಯಲ್ಲಿ ಸಾಧಿಸಲು ಹವಣಿಸುವ, ಸಮಾಜ ಹಿತವನ್ನೇ ಗುರಿಯಾಗಿರಿಸಿರುವ, ಸಂಸ್ಥೆಗೆ ನನ್ನ ಕೊಂಚ ಸೇವೆ ಸಲ್ಲಿಸಿದರೆ ಏನು ತಪ್ಪು? ಎಂದು ರವಿವಾರ ಬೆಳಿಗ್ಗೆ ಎರಡು ದೊಡ್ಡ ಬಲಿತ ಕಾಯಿಗಳನ್ನು ಒಡೆದಿಟ್ಟು ಇತರ ಪರಿಕರಗಳನ್ನು ಜೋಡಿಸಿಟ್ಟು ಕರೆದೊಯ್ಯಲು ಬರಲಿದ್ದ ಸ್ವಯಂ ಸೇವಕರಿಗಾಗಿ ಕಾಯುತ್ತ

ಕುಳಿತೆ. ಒಂದು ಗಂಟೆ ತಡಮಾಡಿ ಬಂದ ಮಹಿಳೆಯೋರ್ವಳು ರಿಕ್ಷಾದಿಂದ ಇಳಿದೊಡನೆ, "ಎಲ್ಲಿ ಮ್ಯಾಡಂ, ಚಟ್ನಿಪುಡಿ ಸಾಮಾನು, ಹಾಗು ಜೊತೆಗೆ ತಿನ್ನಲು ಅಕ್ಕಿರೊಟ್ಟಿಗಳು?" ಎಂದು ಕೇಳಿದಳು.

ನನ್ನ ಎದೆ ಝಲ್ ಎಂದಿತು.

"ಚಟ್ನಿಪುಡಿಯಷ್ಟೇ ನನ್ನ ಸ್ಪೆಶಲ್ ತಯಾರಿಕೆ ಎಂದು ತಿಳಿದಿದ್ದೆನಲ್ಲ? ರೊಟ್ಟಿಗಿಟ್ಟಿ ಮಾಡಿಲ್ಲ! ನೀವೂ ಹೇಳಲಿಲ್ಲ" ಎಂದೆ.

ಆಕೆ ಜೋಲುಬಿದ್ದ ಮುಖದಿಂದ ಕೈಯಲ್ಲಿದ್ದ 'ಕೆಳದಿ'ಯ ಮುಖಪುಟ ತೋರಿಸಿ, "ಇವು ಒಟ್ಟಿಗೇ ತಿನ್ನುವ ವಸ್ತುವಲ್ಲವೇ? ಈಗೇನು ಮಾಡುವುದು 15 ಜನ ಕಾದಿರುತ್ತಾರೆ!" ಎಂದು ಆಕಾಶವೇ ಕಳಚಿ ಬಿದ್ದಂತೆ ನುಡಿದಳು.

"ಅದೊಂದು ವ್ಯಂಜನ ಮಾತ್ರ. ಬ್ರೆಡ್-ಬೆಣ್ಣೆ ಜೊತೆಗೆ ತಿನ್ನಲೂ ಬರುತ್ತದೆ" ಎಂದು ಸಂತೈಸಿ, ಪಕ್ಕದ ಬೇಕರಿಯಿಂದ ನಾಲ್ಕು ಬ್ರೆಡ್, ಬೆಣ್ಣೆಯ ಪ್ಯಾಕೆಟ್ ಕೊಂಡುತಂದೆ.

ಚಟ್ನಿಪುಡಿಯ ಪ್ರದರ್ಶನ ಚೆನ್ನಾಗಿ ನಡೆಯಿತು. 'ಇನ್ನಿಷ್ಟು ಉಳಿದಿದ್ದರೆ ಮನೆಗೆ ಕಟ್ಟಿಸಿಕೊಂಡು ಹೋಗಬಹುದಿತ್ತು!' ಅನೇಕರು ಮಿಡುಕಿದರು.

ಮನೆಗೆ ಬಂದು ನೋಡುತ್ತೇನೆ, ಪುಟ್ಟ ತೆಂಗಿನಕಾಯಿಗಳ ದೊಡ್ಡ ಪ್ಲಾಸ್ಟಿಕ್ ಚೀಲ, ನನ್ನ ದಾರಿ ಕಾಯುತ್ತ ಕುಳಿತಿದೆ! "ನಿನ್ನ ಗೆಳತಿ ಅಂಜಲಿ, ಇವನ್ನು ಇಟ್ಟು ಹೋಗಿದ್ದಾಳೆ. ಸಾಧ್ಯ ಆದರೆ ಚಟ್ನಿಪುಡಿ ಮಾಡಿಕೊಡು. ಇಲ್ಲವಾದರೆ ನೀನೇ ಇವುಗಳ ಸದುಪಯೋಗ ಮಾಡಿಕೊಳ್ಳಬಹುದು! ಎಂದು ಹೇಳಿದ್ದಾಳೆ." ಬೇಸರದಿಂದ ರಾಯರು ನುಡಿದರು. ಬೇಸರಕ್ಕೆ ಕಾರಣವಿತ್ತು. 2 ವಾರಗಳ ಹಿಂದೆ ನಡೆದ ಅಂಜಲಿ ಮಗಳ ಮದುವೆಯಲ್ಲಿ ಹಂಚಲು ತಂದ ಕಾಯಿಗಳವು. ಎಲ್ಲವೂ ಎಳೆಯವಾಗಿ ಕೆಟ್ಟು ನಿಂತಿದ್ದ ವಿಚಾರ, ಕಾಯಿ ನಿಷ್ಣಾತರ ಗಮನಕ್ಕೆ ಆಗಲೇ ಬಂದಿತ್ತು. ಆದರೂ ಒಡೆದು ನೋಡಿದೆ. ಒಂದು ಎರಡು, ಮೂರು, ಎಲ್ಲವೂ ಕೊಳೆತಿದ್ದವು. ಅಂಜಲಿಗೆ ಫೋನಿಸಿ ಗಾರ್ಬೆಜ್ ತೊಟ್ಟಿಗೆ ಅವನ್ನು ವರ್ಗಾಯಿಸಿದ್ದಾಯ್ತು.

ಚಟ್ನಿಪುಡಿ ಡಿಮ್ಯಾಂಡ್ ಏರುತ್ತಲೇ ಇತ್ತು. ಮನೆಯಲ್ಲಿ ಇರಲಿ, ಇಲ್ಲದಿರಲಿ, ಚಟ್ನಿಯ ರೂಪಾಂತರ ಪಡೆಯಲು ಕಾಯಿಗಳು ಮನೆಗೆ ಬಂದು ಬೀಳಲಾರಂಭಿಸಿದವು. ಇದಕ್ಕೆ ಉಪಾಯ ಯೋಚಿಸಬೇಕಾಯಿತು.

ಮುಂದಿನ ತಿಂಗಳ 'ಕನಸಿನ ಕೆಳದಿ'ಯಲ್ಲಿ 'ಆರೋಗ್ಯವಾರ್ತೆ'ಯಡಿ 'ಸೋದರಿಯರಿಗೆ ಎಚ್ಚರ' ಪ್ರಕಟವಾಗಿತ್ತು. "ಇತ್ತೀಚೆಗೆ ತೆಂಗಿನಕಾಯಿ ಬೆಲೆ ವಿಪರೀತ ಹೆಚ್ಚಿರುವದರಿಂದ ಗೃಹಿಣಿಯರು ಸೀಳಿದ, ಒಡೆದ, ಅರ್ಧಹಾಳಾದ, ಹಾಳಾಗುತ್ತಲಿರುವ ಕೊಬ್ಬರಿಯನ್ನು ಚಟ್ನಿಪುಡಿ, ಮತ್ತಿತರ ವ್ಯಂಜನಮಾಡಿ, ಉಳಿತಾಯಕ್ಕೆ ಹವಣಿಸುತ್ತಿದ್ದಾರೆ. ಆದರೆ ಆರೋಗ್ಯ ದೃಷ್ಟಿಯಿಂದ ಇದು ತುಂಬ ಹಾನಿಕರ! ಜಗತ್ ಕಲ್ಯಾಣ ಫಾರ್ಮಸಿಯ ಪ್ರಯೋಗಶಾಲೆಯಲ್ಲಿ ಕೈಕೊಂಡ ಪ್ರಯೋಗದಿಂದ ಇದು ಸಿದ್ಧವಾಗಿದೆ. ಹೃದಯದ ಕಾಯಿಲೆಗಳು, ಇನ್ನಿತರ ರೋಗಗಳಿಗೆ ಸ್ವಯಂ ಆಹ್ವಾನ ನೀಡಿದಂತೆ!" ಎಂದು ಕೊನೆಯಲ್ಲಿ ಡಾ. ರುಚಿರಾ, ಕಲ್ಪವೃಕ್ಷ ಕ್ಲಿನಿಕ್, ಕಲಾಸಿಪಾಳ್ಯ, ಬೆಂಗಳೂರು ಎಂಬ ಪೂರ್ಣವಿಳಾಸ ಇತ್ತು. ಜೊತೆಗೆ ಮೊದಲ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿದ್ದ 'ಹಾಳಾಗಲಿರುವ' ಶಬ್ದದ ಮುಂದೆ 'ಹಂತದಲ್ಲಿದ್ದ' ಶಬ್ದ ಮುದ್ರಣ ತಪ್ಪಿನಿಂದ ಕೈಬಿಟ್ಟು ಹೋಗಿದೆಯೆಂಬ ವಿಷಾದವಿತ್ತು.

ಚಟ್ನಿಪುಡಿಗೆ ಡಿಮ್ಯಾಂಡ್ ಹಾಗೂ ಹಾಳಾದ ತೆಂಗಿನಕಾಯಿಗಳ ಆಗಮನ, ತಂತಾನೇ ನಿಂತು ಹೋದವು.

■

# ಜವಳಿ ವ್ಯಾಪಾರಿಯ ಸೊಸೆಯಾಗಿ...

ವಿವಾಹಪೂರ್ವದಲ್ಲಿ ಬಟ್ಟೆ-ಬರೆ ಖರೀದಿಯಲ್ಲಿ ನಾನು ಪರಿಣತೆ! ಎಂದು ಪರಿಚಿತ ವಲಯಗಳಲ್ಲಿ ಪ್ರಶಂಸೆಗೆ ಪಾತ್ರಳಾಗಿದ್ದೆ. ತಂದೆಯ ಧೋತರ, ಅಕ್ಕನ ಸೀರೆ, ತಮ್ಮನ ಪ್ಯಾಂಟ್ ಬಟ್ಟೆ, ತಂಗಿಯ ಸ್ಕರ್ಟ್ ಡಿಝ್ಯಾನ್‌ಗಳನ್ನು ನಾನೇ ಆರಿಸಿ ತರುತ್ತಿದ್ದೆ. ಗೆಳತಿಯರು, ಸಂಬಂಧಿಗಳು, ಸಹೋದ್ಯೋಗಿಗಳು ಈ ಕ್ಷೇತ್ರದಲ್ಲಿ ಜಾಣೆ, ಎಂದು ಆಗೀಗ ಸಹಾಯ ಕೋರಿದ್ದುಂಟು. ಆದರೆ ಮದುವೆಯಾದ ಬಳಿಕ, ದುರ್ದೈವದಿಂದ ಜವಳಿ ಅಂಗಡಿ ಮಾಲಿಕನ ಪುತ್ರನನ್ನೇ ಪತಿಯಾಗಿ ಪಡೆದು, ಅವರು ಪತ್ನಿಯ ಈ ವಿಶೇಷ ಕೌಶಲ್ಯಕ್ಕೆ ಕವಡಿಯ ಬೆಲೆಯನ್ನೂ ಕೊಡದಾದರು! ನಾನು ಈ ವಿಚಾರದಲ್ಲಿ ಮೋಸಹೋದೆನೇ? ಎನಿಸದಿರಲಿಲ್ಲ. ಸಾಲದಕ್ಕೆ ತಮ್ಮ ಮೊದಲ ಸಂಬಳದಿಂದ ನನಗೆ ಹೇಳದೇ ಕೇಳದೇ, ಜೊತೆಗೆ ಕರೆದೊಯ್ಯದೇ ಬಿನ್ನಿ ಶಾಟ್ ಸಿಲ್ಕ್ ಸೀರೆಯನ್ನು ತಂದರು. ಅದರ ದರ್ಶನ ಮಾತ್ರದಿಂದಲೇ ಕೆರಳಿದ ಹೆಣ್ಣುಹುಲಿಯಂತೆ ಅವರ ಮೇಲೆ ಎರಗಿದಾಗ,(ಇದು ಅವರ ಅಭಿಪ್ರಾಯ!) ರಾಯರಿಗೆ ತಾವು ಮಾಡಿದ ಅಂತಹ ಅಪರಾಧ ಯಾವುದೆಂದು ತಿಳಿಯಲಿಲ್ಲ. ಭಾರೀ ಬೆಲೆಯ ಸೀರೆ ಕೊಳ್ಳುವಾಗ, ನಾನು ಅನುಸರಿಸುವ ಸೂತ್ರವೇ ಅತ್ಯಂತ ಸೂತ್ರಬದ್ಧವಾದದ್ದು, ಎಂದು ಈವರೆಗೆ ತಿಳಿದಿದ್ದೆ. ಅಂಗಡಿ ಹೊಕ್ಕೊಡನೆ ಆ 'ಜಾತಿ'ಯ ಸೀರೆಗಳನ್ನೆಲ್ಲ ಅಂಗಡಿಕಾರನಿಂದ ತೆಗೆಸಿ ಪ್ರದರ್ಶನಕ್ಕೆ ಹರಡಿ ಇಡಲು ಹೇಳುವದು. ಬೇರೆ ಬೇರೆ ಮೈ-ಬಾರ್ಡರ್ ಡಿಝ್ಯಾನ್ ಇಲ್ಲವೇ? ಎಂದು ಕೇಳುವದು, ಸೆರಗು, ಬಾರ್ಡರ್, ಸೀರೆಯ ಬಣ್ಣಗಳ ಹೊಂದಾಣಿಕೆ ಇದೆಯೇ ಎಂದು ನಾಲ್ಕಾರು ಬಾರಿ ಪರಿಶೀಲಿಸುವದು, ಐದಾರು ಅಂಗಡಿಗಳನ್ನು ಸುತ್ತಾಡಿ, ವೈವಿಧ್ಯಕ್ಕಾಗಿ ಹಪಹಪಿಸಿ, ಅಂತೂ ಕೊನೆಗೊಮ್ಮೆ ಅರೆಮನಸ್ಸಿನಿಂದ ಸೀರೆಯೊಂದನ್ನು ಖರೀದಿಸಿ, ಸಿಕ್ಕಾಪಟ್ಟೆ ಚೌಕಾಶಿ ಮಾಡಿ, ಬೆಲೆಯನ್ನು ಇಳಿಸಿಕೊಂಡು ಮನೆಗೆ ತಂದಾಗ, ನೆರೆಹೊರೆಯವರು ಕೌತುಕದಿಂದ ಬಂದು ನೋಡಿ, ಮೂಗು ಮುರಿದು ಕಾಮೆಂಟ್ಸ್ ಮಾಡಿದಾಗ, ವಾಪಸ್ ಮಾಡಿ, ಇನ್ನೊಂದನ್ನು ತರುವುದು ತೀರಾ ಸಾಮಾನ್ಯವಾಗಿತ್ತು. ಹೀಗಿದ್ದಾಗ ರಾಯರಂತೆ ಹೊಕ್ಕ ಅಂಗಡಿಯಿಂದಲೇ ಸೀರೆಗಳನ್ನು ನೋಡಿ ಐದೇ ನಿಮಿಷದಲ್ಲಿ ಕಾಸುಕೊಟ್ಟು ತಂದ ಸೀರೆಯನ್ನು ಒಪ್ಪಿಕೊಳ್ಳುವದಾದರೂ ಹೇಗೆ?

ಒಂದೆರಡು ಬಾರಿ, ಬಟ್ಟೆಕೊಳ್ಳುವಾಗ ನನ್ನನ್ನು ಕರೆದೊಯ್ದರು. ಕ್ಷಣಾರ್ಧದಲ್ಲಿ ಕೊಳ್ಳುವ ನಿರ್ಧಾರಕ್ಕೆ ಬಾರದ ನನ್ನ ಸ್ವಭಾವದಿಂದ ಬೇಸತ್ತು ಹೋದರು. ಆ ಬಳಿಕ ಒಂದೇ ಒಂದು ಟಾವೆಲ್ ಕೊಳ್ಳುವ ಸ್ವಾತಂತ್ರ್ಯವನ್ನೂ ನನ್ನಿಂದ ಕಸಿದುಕೊಂಡುಬಿಟ್ಟರು. ಸೀರೆ, ಬ್ಲೌಸ್‌ಬಟ್ಟೆ, ಪೆಟಿಕೋಟ್‌ಗಳನ್ನು ಕೂಡ, ತಾವೇ ಖರೀದಿಸಿ ತರಲಾರಂಭಿಸಿದರು. ಈಗಲೂ ಸೀರೆಗಳ ಆಯ್ಕೆಯ ನನ್ನ ಉತ್ತಮ ಅಭಿರುಚಿಗಾಗಿ, ಹೊಗಳಿದವರಿಗೆ, ತಪ್ಪಿಕೂಡ ಇದು ರಾಯರ ಆಯ್ಕೆ! ಎಂದು ಹೇಳುವ ಗೋಜಿಗೆ ಹೋಗಲಿಲ್ಲ. ರಾಯರು ದೊಡ್ಡ ದೊಡ್ಡ ಅಂಗಡಿಗಳ ಗೊಡವೆಗೆ ಹೋಗದೇ ಚಿಕ್ಕಪೇಟ್‌ದಲ್ಲಿ ಇದ್ದ ಗುರುತಿನ ಸಣ್ಣ

ಅಂಗಡಿಗಳಲ್ಲಿ ವ್ಯವಹಾರ ಮಾಡುತ್ತಾರೆ. ಸ್ವತಃ ಚಿತ್ರಕಲಾವಿದರು, ಸೌಂದರ್ಯಾರಾಧಕರು ಆಗಿದ್ದರಿಂದ ಕ್ಷಣಾರ್ಧದಲ್ಲಿ ಒಪ್ಪವಾದ ಮ್ಯಾಲನ್ನು ಆರಿಸುತ್ತಾರೆ. ಅಂಗಡಿಕಾರನ ಬಳಿ ಇದ್ದ ಒಂದೇ ಒಂದು ಪೀಸನ್ನು ಕೊಂಡುತಂದದ್ದು ಇದೆ. ಸಹೋದ್ಯೋಗಿಗಳಿಂದ ನಾನು ಬೆನ್ನು ಚಪ್ಪರಿಸಿಕೊಂಡಂತೆ, ತಾವೂ ಅಂಥದಕ್ಕಾಗಿ ಯತ್ನಿಸಿ, ಸಿಗದೇ ಹಲುಬುತ್ತ ಹಿಂದಿರುಗಿದ ಪ್ರಸಂಗಗಳೂ ಇವೆ! ಆದರೆ ನಾನು ಮಾತ್ರ ನನ್ನನ್ನು ವಿಚಾರಿಸದೇ ತನ್ನ ಆಯ್ಕೆಯನ್ನು ನನ್ನ ಮೇಲೆ ಹೇರಿದ್ದಕ್ಕೆ ಆಕ್ಷೇಪಿಸುತ್ತ, 'ಪಾಲಿಗೆ ಬಂದದ್ದೇ ಪಂಚಾಮೃತ' ಎಂದು ಅವರಿಗೆ ಮನವರಿಕೆ ಮಾಡಿಕೊಡುವ ಪ್ರಯತ್ನವನ್ನು ಜಾರಿ ಇಟ್ಟಿದ್ದೇನೆ.



ಒಂದು ವರ್ಷದ ಮಟ್ಟಿಗೆ ರಾಯರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಫೆಲೋಶಿಪ್ ಪಡೆದು, ಆದಿವಾಸಿಗಳ ಅಧ್ಯಯನಕ್ಕೆ ಮಧ್ಯಪ್ರದೇಶಕ್ಕೆ ಹೋಗುವ ಪ್ರಸಂಗ ಬಂದಾಗ, ನನ್ನ ಬಟ್ಟೆ-ಬರೆ ಖರೀದಿಯ ಅದುಮಿಟ್ಟ ಆಸೆಗೆ ಗರಿ ಮೂಡಿದಂತಾಯಿತು. ಹಣದ ಮುಗ್ಗಟ್ಟು ಎದುರಿಸಬಾರದೆಂದು ರಾಯರು ಕೈತುಂಬ ಹಣಕೊಟ್ಟೇ ಹೋಗಿದ್ದರು. ಇಂಗ್ಲಿಷ್, ಕನ್ನಡಪತ್ರಿಕೆಗಳಲ್ಲಿ, ಎಲ್ಲೆಲ್ಲಿ ಸುಲಭ ಬೆಲೆಗೆ ಅಥವಾ ಸೇಲ್ ರೂಪದಲ್ಲಿ ಸೀರೆಗಳ ಮಾರಾಟ ಇದೆ? ಎಂದು ನೋಡುವುದು, ದಿನಚರಿಯ ಭಾಗವಾಗಿ ಬಿಟ್ಟಿತು. ಎಮ್.ಜಿ. ರೋಡಿನಲ್ಲಿ ಮೈಸೂರ್ ಸಿಲ್ಕ್, ಕಮರ್ಶಿಯಲ್ ಸ್ಟ್ರೀಟ್‌ನಲ್ಲಿ ಶಿಫಾನ್, ವಿಂಡ್ಸರ್ ಮೇನರ್ ಸೀರೆಗಳ ಪ್ರದರ್ಶನಗಳನ್ನೆಲ್ಲ ಕಣ್ತುಂಬ ನೋಡಿದೆ. ಕೆಲವನ್ನು ಕೊಂಡೂ ಇದ್ದೆ. ರಾಯರಿತ್ತ ಹಣ ಸಾಲದೇ ಹೋಗಿ, ಬ್ಯಾಂಕಿನಿಂದ ಸಾಲ ಪಡೆದೆ. ಬಗೆಬಗೆಯ ಸೀರೆಗಳು ಹ್ಯಾಂಗರ್‌ಗಳ ಮೇಲೆ ವಿರಾಜಿಸುತ್ತ, ಆಲ್ಮೇರಾ ತೆಗೆದಾಗೊಮ್ಮೆ ನನ್ನ ಅಭಿರುಚಿಯ ಬಗ್ಗೆ ಹೆಮ್ಮೆ ಪಡುವಂತೆ ಮಾಡುತ್ತಿದ್ದವು. ಆದರೆ ರಾಯರು ಏನೆನ್ನುತ್ತಾರೋ! ಎಂಬ ಅಳುಕು ಇದ್ದೇ ಇತ್ತು. ಅವರು ಏನೂ ಹೇಳದೇ ನಿನ್ನ ಅಲ್ಪ ಆಸೆ ನೆರವೇರಿಸಿಕೊಳ್ಳಲು ಅವಕಾಶ ಸಿಕ್ಕಿತಲ್ಲ! ಎಂದು ಉದ್ಗರಿಸಿದರು. ಆದರೆ ಮಧ್ಯಪ್ರದೇಶದಲ್ಲಿ ತಾವು ಕಷ್ಟಪಟ್ಟು ಉಳಿಸಿದ ಪುಡಿಗಾಸುಗಳ ಸಂಗ್ರಹ, ನನ್ನ ಸೀರೆ ಸಾಲ ತುಂಬಲಿಕ್ಕೆ ಬಳಸುವ ಪ್ರಸಂಗ ಬಂದಾಗ ಮಾತ್ರ ಕಸಿವಿಸಿಯಾಗದೇ ಇರಲಿಲ್ಲ.

"ನನ್ನ ಬಟ್ಟೆಬರೆಗಳೆಲ್ಲ ಹರಿಯಲು ಬಂದಿವೆ. ಹೊಸಬಟ್ಟೆ ಹೊಲಿಸಬೇಕಾಗಿದೆ. ಮಧು ಮಾರ್ಕೆಟಿಗೆ ಹೋಗಬೇಕೆಂದಿದ್ದೇನೆ. ನೀನೂ ಬಂದರೆ ಚೆನ್ನಾಗಿರುತ್ತದೆ" ಎಂದು ಅಪರೂಪದ ಮಾತುಗಳು ಕಿವಿಗೆ ಇಂಪನ್ನುಂಟುಮಾಡಿದವು. ಕೊನೆಗೊಮ್ಮೆ ಬಟ್ಟೆ-ಖರೀದಿಯಲ್ಲಿ ಪತ್ನಿ ಚದುರೆ! ಎಂದು ರಾಯರು ಒಪ್ಪಿಕೊಂಡರಲ್ಲ! ಎಂದು ಅಭಿಮಾನ ಪಡುವಂತಾಯಿತು. ಈ ಮಾರ್ಕೆಟಿನಲ್ಲಿರುವ ಮಾಣಿಕ ಕಂಪನಿಯವರು ಬಲುದೊಡ್ಡ ಠೋಕ ಜವಳಿ ವ್ಯಾಪಾರಿಗಳು. ನಮ್ಮ ಕುಟುಂಬದವರೆಲ್ಲ ವ್ಯವಹಾರ ಮಾಡುವದು ಅವರಲ್ಲಿಯೇ. ರಾಯರು ತಾನು ಲಕ್ಷ್ಮಣ ಕಾಮತರ ಹಿರಿಯ ಮಗ, ಬಂದಿದ್ದೇನೆಂದು ಹೇಳಿಕಳಿಸಿದಾಗ ಸ್ವತಃ ಮಾಲಕರೇ ಎದ್ದುಬಂದು, ಕೈಹಿಡಿದು ಆಲಂಗಿಸಿ, ನನಗೆ ಕೈ ಜೋಡಿಸಿ ನಮಸ್ಕರಿಸಿ, ಗೌರವದಿಂದ, ತಮ್ಮ ವಾತ-ನಿಯಂತ್ರಿತ ಆಫೀಸಿಗೆ ಕರೆದೊಯ್ದು ತಂಪಾದ ಪಾನೀಯದಿಂದ ಉಪಚರಿಸಿ, "ನಿಮ್ಮ ತಮ್ಮಂದಿರು ಬಂದಾಗೆಲ್ಲ ತಮ್ಮ ಅಣ್ಣ ದೊಡ್ಡ ವಿದ್ವಾಂಸರು, ಅಮೇರಿಕೆಯ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಒಳ್ಳೆ ಲೇಖಕರು, ಫೋಟೋಗ್ರಾಫರ! ಎಂದೆಲ್ಲ ಹೇಳಿದ್ದುಂಟು. ಇದೇ ಊರಲ್ಲಿದ್ದ ನಿಮ್ಮನ್ನು ನಾವೇ ಬಂದು ಕಾಣಬೇಕಿತ್ತು.....ನೀವಾಗಿಯೇ ದರ್ಶನಲಾಭ ಇತ್ತಿರಿ!" ಎಂದು ಹೆಚ್ಚಿನ ಸಂತೋಷ ವ್ಯಕ್ತ ಪಡಿಸಿದರು. "ನನ್ನಿಂದ ಏನು ಸೇವೆ ಬೇಕು?" ಎಂದು ವಿನಯದಿಂದ ಕೇಳಿದಾಗ, "ಹೆಂಗಳೆಯರು ಸೀರೆ ಖರೀದಿಯಲ್ಲಿ ಹೇಗೆ ಮೋಸ ಹೋಗುತ್ತಾರೆ, ಎಂದು ಮನವರಿಕೆ ಮಾಡಿಕೊಡಲು, ಅದು ತಮ್ಮಿಂದಲೇ! ಎಂದುಕೊಂಡು ಕರೆದುಕೊಂಡು ಬಂದಿದ್ದೇನೆ" ನಗುತ್ತ ಮಾಣಿಕಲಾಲರು ಆ ಕೂಡಲೇ ಮುನೀಮನನ್ನು ಕರೆದು ಸೀರೆಗಳ ವಿಭಾಗಕ್ಕೆ ಕರೆದೊಯ್ದು ಸೂಕ್ತ ಮಾಹಿತಿ ನೀಡುವಂತೆ ನಿರ್ದೇಶಿಸಿದರು.

ಶಿಸ್ತಿನಿಂದ ಜೋಡಿಸಿಟ್ಟ, ತೂಗಹಾಕಿದ ಸೀರೆಗಳ ವೈಖರಿ ನೋಡಲು ಎರಡೂ ಕಣ್ಣು ಸಾಲದಾದವು. "ಸ್ತ್ರೀಯರ ಮನಸ್ಸನ್ನು ಅರಿತುಕೊಳ್ಳುವುದು ಎಷ್ಟು ಕಷ್ಟವೋ, ಅವರು ಉಡುವ ಸೀರೆಗಳ ಮೌಲ್ಯಮಾಪನ ಮಾಡುವುದು ಅದಕ್ಕಿಂತ ಬಿಗಿಯಾದದ್ದು!

ಫ್ಯಾಕ್ಟರಿಯಿಂದ ಬಂದ ಪ್ರತಿ ಸೀರೆಗೆ ಅಂಟಿಸಿದ ಚೀಟಿಯನ್ನು ನೋಡದೇ ಅದರ ಬೆಲೆ ಹೇಳುವದು, ವೃತ್ತಿಯಲ್ಲಿ ಸವೆಯುತ್ತಿರುವ ನಮ್ಮಂಥ ವ್ಯಾಪಾರಿಗಳಿಗೇ ಕಷ್ಟಸಾಧ್ಯವಾದಾಗ ಗಿರಾಕಿಗಳಿಗೆ ಹೇಗೆ ಸಾಧ್ಯವಾದೀತು? ಒಂದು ಸೀರೆಯ ಬೆಲೆ ಹತ್ತಾರು ಘಟಕಗಳಿಂದ ನಿರ್ಧಾರವಾಗುತ್ತದೆ. ಎರಡು ಸೀರೆಗಳ ಬಣ್ಣ, ಡಿಝ್ಯಾನ್ ಒಂದೇ ಇದ್ದರೂ ಬೆಲೆಯಲ್ಲಿ ಆಕಾಶ-ಪಾತಾಳಗಳ ಅಂತರ ಇರಲು ಸಾಧ್ಯವಿದೆ. ಒಂದೇ ಮಾದರಿಯ ಬಣ್ಣ, ನಕ್ಷೆಗಳನ್ನು, ರೇಶಿಮೆ, ಕೃತಕರೇಶಿಮೆ, ಮಿಶ್ರ ಅರಳೆ-ರೇಶ್ಮೆಯ ಬಟ್ಟೆಗಳಿಗೆ ಬಳಸಿದಾಗ, ಒಂದರಿನ್ನೊಂದು ಬೇರ್ಪಡಿಸುವದು ಕಷ್ಟದ್ದಾಗುತ್ತದೆ. ಉದ್ದ-ಅಗಲಳತೆಯಲ್ಲಿ ಕೊಂಚವೇ ಕಡಿತ ಮಾಡಿದರೂ ಅವುಗಳ ಬೆಲೆಯಲ್ಲಿ ಏರು-ಪೇರಾಗುತ್ತದೆ. ಇವನ್ನೆಲ್ಲ ಗಣನೆಗೆ ತಂದುಕೊಳ್ಳಲಾಗದ ಗಿರಾಕಿಗಳಿಗೆ ಮೋಸಮಾಡುವದು ಅತಿ ಸುಲಭ. ಇಕೋ ಇಲ್ಲಿ ನೋಡಿ, ಈ ಪ್ರಿಂಟೆಡ್ ಸೀರೆಗಳು ನಾಲ್ಕೂ ಒಂದೇ ತರಹ ಕಂಡರೂ, ಅವುಗಳ ಬೆಲೆ ಕ್ರಮೇಣ ನೂರಿಪ್ಪತ್ತು, ಇನ್ನೂರೈವತ್ತು, ಮೂರುನೂರು ಹಾಗೂ ನಾನೂರು ರೂಪಾಯಿಗಳು! ಈ ಫೇರಿವಾಲಾರು, ಚಿಟ್‌ಫಂಡಿನವರು, ಅಗ್ಗದ ಸೀರೆಯಂಗಡಿಯವರು ನೂರಿಪ್ಪತ್ತರ ಸೀರೆಗಳನ್ನು ಇನ್ನೂರಕ್ಕೆ ಮಾರಿ ಜೇಬು ತುಂಬಿಕೊಳ್ಳುತ್ತಾರೆ. ಗಿರಾಕಿಗಳು ಮೂರುನೂರರ ಸೀರೆಗಳು ಇನ್ನೂರಕ್ಕೆ ಸಿಕ್ಕವೆಂಬ ಭ್ರಮೆಯಲ್ಲಿ ಕೊಂಡು ಖುಷಿಪಡುತ್ತಾರೆ. ಹೀಗೆ ಮಾಡದಿದ್ದರೆ ಕೇವಲ ಹತ್ತಿಪ್ಪತ್ತು ಸೀರೆಗಳನ್ನು ಹೊತ್ತು ತಿರುಗುವ ಫೇರಿವಾಲಾರು ತಮ್ಮ ಹೊಟ್ಟೆ ತುಂಬಿಕೊಳ್ಳುವ ಬಗೆಯಾದರೂ ಯಾವುದು?" ಎಂದು ಮುನೀಮನು ಪ್ರಶ್ನಿಸಿದ.

ಇಷ್ಟೆಲ್ಲ ವಿವರಣೆ, ನನ್ನ ಸೀರೆಯ ಪರೀಕ್ಷಾ ಸಾಮರ್ಥ್ಯವನ್ನು ಪರೀಕ್ಷಿಸುವಂತೆ ಇತ್ತು. ಅಂತೆಯೇ "ನೂರರದು ಯಾವುದು, ಮುನ್ನೂರರದು ಯಾವುದು? ಎಂದು ಅರಿಯುವ ಸೌಲಭ್ಯಗಳು ಇಲ್ಲದಿರುವಾಗ ಗಿರಾಕಿಯು ಅಂಗಡಿಕಾರರನ್ನು ನಂಬದೇ ಬೇರೆ ತಾನೆ ಏನು ಮಾಡಲು ಸಾಧ್ಯ?" ಎಂದು ಸವಾಲು ಹಾಕಿದೆ. ಅದಕ್ಕೆ ಆತ, "ನೋಡೀಮ್ಮ, ಎಲ್ಲರೂ ಎಲ್ಲ ವಿಷಯಗಳಲ್ಲಿ ತಜ್ಞರಾಗಿರುವದು ಸಾಧ್ಯವೇ ಇಲ್ಲ. ಆದರೆ ದೇವರು ದಯಪಾಲಿಸಿದ ಬುದ್ಧಿಯನ್ನು ಸರಿಯಾಗಿ ಬಳಸಿದರೆ ಎಲ್ಲವೂ ಅರ್ಥವಾಗುತ್ತೆ! ಬಂಗಾರದ ಬೆಲೆ 10 ಗ್ರಾಂ ಗೆ ನಾಲ್ಕುಸಾವಿರ ರೂಪಾಯಿ ಇರುವಾಗ, ಯಾರಾದರೂ ಎರಡೇ ಸಾವಿರಕ್ಕೆ ಕೊಡುತ್ತೇನೆ! ಎಂದಾಗ, ಅದು ಗಿಲೀಟು ಮಾಡಿದ ಹಿತ್ತಾಳಿ ಎಂದು ಊಹಿಸಲು ಅದ್ಭುತ ಮೇಧಾಶಕ್ತಿ ಬೇಕಿಲ್ಲವಲ್ಲ? ಹಾಗೆಯೇ ಈ ಕೃತಕ ನೂಲಿನ ಶಕ್ತಿಯ ಮೇಲೆ ಬಟ್ಟೆಯ ಬೆಲೆ ನಿರ್ಧಾರಿತವಾಗಿರುತ್ತದೆ. ಇನ್ನೂರು ರೂಪಾಯಿ ಸೀರೆ ವರ್ಷಗಟ್ಲೆ ತಾಳಿಕೆ ಬರಬಹುದು. ಐವತ್ತು ರೂಪಾಯಿಯದು ಕೆಲ ತಿಂಗಳು ಕೂಡ ಬಾಳಿಕೆ ಬಾರದು! ಆದ್ದರಿಂದ ನಂಬಿಗಸ್ಥ ಅಂಗಡಿಕಾರರನ್ನು ಗುರುತಿಸಿ ಅವರ ಹತ್ತಿರವೇ ವ್ಯವಹರಿಸುವದು ಅತೀ ಸೂಕ್ತವಾದದ್ದು! ತಿಳಿವಳಿಕೆಯಿದ್ದವರು ಹಾಗೆಯೇ ನಡೆದುಕೊಳ್ಳುತ್ತಾರೆ" ಎಂದು ಸೀರೆ ಖರೀದಿಯ ಮೇಲೆ ಕೊನೆಯ ತೀರ್ಪನಿತ್ತ.

ರಾಯರು ಆರು ಸೀರೆ ಖರೀದಿಸಿದರು. ಅಂಗಡಿಕಾರ ರೋಖ ಬೆಲೆಯಲ್ಲಿ ಶೇಕಡಾ ಇಪ್ಪತ್ತರಷ್ಟು, ಖಾಸಗಿ ಬಳಕೆಗಾಗಿ ಕಡಿಮೆಮಾಡಿ, ಮಾರಿದರು. ತಾನಿಲ್ಲದಾಗ, ಸೀರೆ-ಖರೀದಿ ಸಾಹಸದಲ್ಲಿ ನಾನು, ಅದೆಷ್ಟು ಮೋಸ ಹೋಗಿದ್ದೇನೆ, ಎಂದು ಮನವರಿಕೆ ಮಾಡಿಕೊಟ್ಟರು. ಈ ರಾಯರ ವಿಧಾನಕ್ಕೆ ಮೆಚ್ಚಿಕೊಳ್ಳಲೇಬೇಕಾಯಿತು. ಎಷ್ಟೆಂದ್ರರೂ ಜವಳಿ ವ್ಯಾಪಾರಿಯ ಮಗನಲ್ಲವೇ? ಹುಲಿಮರಿ ಹುಲ್ಲು ಮೇವುದೇ? ■

# ನಾಮಾವಾಂತರ

ಚಿಕ್ಕಂದಿನಲ್ಲಿ ಬಂಕಿಮಚಂದ್ರ, ಶರಚ್ಚಂದ್ರ, ರವೀಂದ್ರರ ಕೃತಿಗಳನ್ನು ಓದುತ್ತ ಬಂಗಾಲಿ ಹೆಸರುಗಳ ಬಗ್ಗೆ ವಿಶೇಷ ಆಕರ್ಷಣೆ ತಳೆದಿದ್ದೆ. ಮುಂದೊಂದು ದಿನ ಕಲಕತ್ತೆಯ, ಆಕಾಶವಾಣಿ ಕೇಂದ್ರದಲ್ಲಿ ಕೆಲಸ ಮಾಡುವ ಸಂದರ್ಭ ಬಂದಿತು. ಬಂಗಾಲಿ ನಾಮಧೇಯಗಳ ವೈವಿಧ್ಯ ಮತ್ತು ಸಂಖ್ಯೆಗಳು ಬೆರಗುಗೊಳಿಸಿದವು. ಮೂರ್ತಿ, ಶ್ರೀನಿವಾಸ, ಬಸವರಾಜ, ಮಂಜುನಾಥರ ನಾಡಿನಲ್ಲಿ ಇಂತಹ ಪ್ರಸಂಗ ಯಾವತ್ತೂ ಬರಲಿಲ್ಲ! ಬಂಗಾಲಿಗಳಲ್ಲಿ ಸರ್‌ನೇಮ್ ಅಥವಾ ಉತ್ತರ ಕರ್ನಾಟಕದ ಅಡ್ಡಹೆಸರುಗಳು ಸೀಮಿತ. 'ಅರ್ಜಿ ರೂಪಗಳಾದ ಚಟರ್ಜಿ, ಬ್ಯಾನರ್ಜಿ, ಮುಖರ್ಜಿಗಳು, ಅಲ್ಲದೇ, ಬಿಶ್ವಾಸ್, ರಾಯ್, ಬೋಸ್, ಘೋಷ್, ದಾಷ್ (ದಾಸ್) ಇಷ್ಟೇ ಪ್ರಮುಖವಾಗಿವೆ. ಒಂದು ಆಫೀಸಿನಲ್ಲಿ ಐವತ್ತು ದಾಸ್, ದಾಸ-ಗುಪ್ತರು ಸಿಗುತ್ತಾರೆ! ಹೀಗಾಗಿ ಅವರ ವೈಯಕ್ತಿಕ ಹೆಸರುಗಳಿಂದ ಕರೆಯುವುದು ರೂಢಿ. ದೊಡ್ಡ ಸಂಖ್ಯೆಯಲ್ಲಿದ್ದ ಮಹಿಳಾಮಣಿಗಳ ಹೆಸರುಗಳ ಮೊಟಕುರೂಪಗಳೂ ಪ್ರಚಾರದಲ್ಲಿದ್ದವು. ಅವನ್ನರಿತು ಬರೆದುಕೊಳ್ಳುತ್ತಿದ್ದೆ. ಮೊದಲು ಬರೆದುಕೊಳ್ಳುತ್ತಿದ್ದವುಗಳ ಸಂಖ್ಯೆ ಏರುತ್ತಹೋಗಿ, ಈ ಸಾಹಸ ಬಿಟ್ಟುಕೊಟ್ಟೆ.

ಚಂದ್ರಮುಖಿ, ಚಾರುಲತಾ ಶಾಮಾಸುಂದರಿ, ಮೃಣಾಲಬಾಲ, ಅಘೋರಕಾಮಿನಿ, ಹಳೆ ತಲೆಮಾರಿನ ಹೆಸರುಗಳು. ಈಗಿನವರಲ್ಲಿ ಕರೆಯಲು, ಬರೆಯಲು ಸುಲಭವಾದ ಹೆಸರುಗಳು ಜನಪ್ರಿಯ. ಹೆಚ್ಚಾಗಿ ಸೇವುಲಿ, ಹೇನಾ, ಕೇಯಾ(ಕೇದಿಗೆ), ಚಮೇಲಿ, ಬಕುಲ್, ಮುಕುಲ್ ಎಂಬ ಹೂವಿನ ಹೆಸರುಗಳು ಸುಮಕೋಮಲೆಯರಾಗಿದ್ದ ನಾರೀಮಣಿಯರಿಗಷ್ಟೇ ಮೀಸಲು ಎಂದುಕೊಂಡಿದ್ದೆ. ಆದರೆ ಒಂದಿನ ಪ್ರಸೂನ(ಅಂದರೆ 'ಹೂ') ಮುಖರ್ಜಿ ಎಂಬ ಆರಡಿ ಎತ್ತರದ ಶಾಮಲಕಾಯದ ದಾಂಡಿಗನನ್ನು ಭೇಟಿಮಾಡಿದಾಗ ನನ್ನ ಗ್ರಹಿಕೆ ಸುಳ್ಳಾಯಿತು! ಬಂಗಾಲಿ ಸಂಸ್ಕೃತಮಯ ಭಾಷೆ. ಆದರೆ ಉಚ್ಚಾರ ವೈಶಿಷ್ಟ್ಯದಿಂದಾಗಿ ಸಂಸ್ಕೃತ ಬಲ್ಲವರಿಗೂ ಬೇಸ್ತು ಬೀಳುವ ಪ್ರಸಂಗಗಳು ಬರುತ್ತವೆ. ತಪನ್-ತೊಪೊನ್ ಆಗುತ್ತಾನೆ. ವಿಕಾಸ, ಬಿಕಾಶ್ ಆಗುತ್ತಾನೆ. ಓರ್ವ ಪ್ರಸಿದ್ಧ ವಾಯಲಿನ್ ವಾದಕಿಯ ಹೆಸರು ಶಿಶಿರಕೊನೊ. ಶಿಶಿರ್ ಎಂದರೆ ಶರತ್, ಹೇಮಂತ್‌ರಂತೆ ಋತುವಿನ ಹೆಸರೆಂದು ಭಾವಿಸಿದ್ದೆ. 'ಕೊನೊ' ಏನೆಂದು ತಿಳಿದಿರಲಿಲ್ಲ. ಸಂಶೋಧನೆಯ ಬಳಿಕ ತಿಳಿಯಿತು. ಶಿಶಿರ ಎಂದರೆ ಬಂಗಾಲಿಯಲ್ಲಿ ಮಂಜು. ಕೊನೊ ಎಂದರೆ ಒಂದು ಕಣ. ಶಿಶಿರಕೊನೊ ಮಂಜಿನ ಒಂದೇ ಒಂದು ಕಣ ಎಂದಾಯ್ತು!

ಕಾಂತಾ ಅಥವಾ ಕಾಂತಿ ಎಂದರೆ ನಮ್ಮಲ್ಲಿ ಸ್ತ್ರೀಯಷ್ಟೇ? ಬಂಗಾಲಿಯಲ್ಲಿ ಅದು ಗಂಡಸರ ಹೆಸರಿನ ಕೊನೆಯ ಪದ. ಕಾಂತಿ ಎಂದರೆ ಶರೀರವಂತೆ. ತುಷಾರಕಾಂತಿ ಘೋಷ್, ಪತ್ರಿಕಾ ಜಗತ್ತಿನ ದೀರ್ಘಕಾಲದ ವಿಸ್ಮಯವಾಗಿದ್ದ, ಅಮೃತಬಝಾರ್ ಪತ್ರಿಕೆಯ ಸಂಪಾದಕರು. ಅವರಂತೆ ದಿವ್ಯಕಾಂತಿ, ಪೀಯೂಷ್‌ಕಾಂತಿಯ ಕಾಂತರು ಅಲ್ಲಿದ್ದರು!

ಸುಧೀರರಿದ್ದಂತೆ ಅಧೀರರಿದ್ದಾರೆ. ಪೂರ್ಣಚಂದ್ರರಂತೆ ಅರ್ಧಚಂದ್ರರಿದ್ದಾರೆ.

ನಿರಾಮಯ, ನಿರಾಪದರಿದ್ದಾರೆ. (ನಾವು 'ನಿರುಪದ್ರವಿ' ಎಂದು ಹೆಸರು ಎಂದಾದರೂ ಇಡುತ್ತೇವೆಯೇ ಸದಾ ಕಾಡುವ ಹುಡುಗರಿಗೆ?) ಹೇಮಾಂಗ, ಗೌರಾಂಗರೊಂದಿಗೆ ಮೃಣ್ಮಯ (ಮಣ್ಣಿನ ಮುದ್ದೆ!) ರೂ ಕಾಣಸಿಗುತ್ತಾರೆ. ಸ್ವಪ್ನಾ ಜೊತೆಗೆ ತಂದ್ರಾ ('ನಿದ್ರೆ') ಇರುತ್ತಾಳೆ. ಗೋಧೂಳಿ, ಕುಮಾರಿಯ ಹೆಸರಾಗುತ್ತದೆ. ಮಖ್ಖನ್ (ಬೆಣ್ಣೆ) ನೊನಿ (ಹಾಲಿನ ಕೆನೆ) ಅಂಗುರ್ (ದ್ರಾಕ್ಷಿ) ಮೊದಲಾದ ಆಹಾರ ವಸ್ತುಗಳ ಹೆಸರನ್ನೂ ಹೊಂದಿದವರು ಇರುತ್ತಾರೆ. ಚಂದ್ರಗೋಪಾಲ, ಕಿಶೋರ್ ಮುಂತಾದವುಗಳ ಮೊದಲಭಾಗಗಳು ಇವು ಎಂದು ಕ್ರಮೇಣ ಅರಿತೆ. ಆದರೆ ಉಂಗುರುಗೂದಲಿನ, ಗುಲಾಬಿ ಬಣ್ಣದ ಸುಂದರ ಹುಡುಗಿಯನ್ನು 'ಕೈಕಯಿ' ಎಂದು ಕರೆದಾಗ ಅವಾಕ್ಕಾಗಿದ್ದೆ. ಇದು ಸಾಮಾನ್ಯ ಹೆಸರೆಂದು ಬಳಿಕ ಅರಿತೆ. ಮಂಥರೆ ಕಿವಿಗೆ ಬಿದ್ದಿಲ್ಲ!

ನಾನು ಆಫೀಸಿನಲ್ಲಿ ಜ್ಯೋತ್ಸ್ನಾ. ಕೆ. ಕಾಮತ್ ಎಂದೇ ರುಜುಮಾಡುತ್ತಿದ್ದೆ. ಅಲ್ಲದೇ ಅದೇ ತರಹ ಬೋರ್ಡು ಬರೆಸಿದ್ದೆ. ಒಂದು ದಿನ ಜ್ಯೋತ್ಸ್ನಾ ಸೇನ್ ಎನ್ನುವವರು ಬರೆದ, ಮಿದ್ನಾಪುರದ ರಾಣೀಗಂಜ ಊರಿನಿಂದ ಪತ್ರ ಕೈಸೇರಿತು. ಸಂಗೀತ ಆಡಿಶನ್ ಕುರಿತು ಕೇಳಿದ ಮಾಹಿತಿಯೆಂದು ತೋರುತ್ತದೆ. ಎಂದಿನಂತೆ ಸಾಮಾನ್ಯವಾಗಿದ್ದ ಸರ್! ಮ್ಯಾಡಂ ಎಂದು ಸಂಬೋಧಿಸಿದ ಸಾಮಾನ್ಯ ಪತ್ರಕ್ಕೆ ರುಜು ಹಾಕಿ ಕಳಿಸಲಾಯಿತು. ಬಂದ ಮಾರುತ್ತರದಿಂದ ಬೆಚ್ಚಿಬೀಳುವಂತೆ ಆಗಿತ್ತು.

"ಶ್ರೀಯುತರಾದ ಜ್ಯೋತ್ಸ್ನಾ ಅವರೇ!

ನನ್ನ ಹೆಸರಿನವರೇ ಆದ ತಾವುಗಳು ಈಗ ಕಲಕತ್ತಾ ಆಕಾಶವಾಣಿಯಲ್ಲಿ ವಿಜೃಂಭಿಸುತ್ತಿರುವ ವಿಚಾರ ಖುಷಿಕೊಟ್ಟಿದೆ! 1938ರಲ್ಲಿ ತಮ್ಮನ್ನು ಶಾಂತಿನಿಕೇತನದಲ್ಲಿ ಭೇಟಿಮಾಡಿದ್ದೆ–ನೆನಪಿದೆಯೇ? ಇತ್ತೀಚಿನ ವರ್ಷಗಳಲ್ಲಿ ತಮ್ಮ ಸಮಾಚಾರವೇ ತಿಳಿದಿರಲಿಲ್ಲ. ಮೇದಿನಿಪುರ(ಮಿದ್ನಾಪುರ)ದವರೇ ಆದ ತಾವು ಸ್ವಂತ ಊರನ್ನೇಕೆ ಮರೆತಿರಿ? ಈ ಬಂಧು (ಸ್ನೇಹಿತ)ವನ್ನೇಕೆ ತ್ಯಜಿಸಿದಿರಿ?" ಎಂದೆಲ್ಲ ತೀರ ವೈಯಕ್ತಿಕ ಮಾಹಿತಿಯನ್ನೆಲ್ಲ ಸೇರಿಸಿದ ಪತ್ರ ಅದಾಗಿತ್ತು. ಇದಕ್ಕೆಲ್ಲ ನನ್ನ ಹೆಸರೇ ಕಾರಣವೆಂದು ತಿಳಿಯಿತು. ಸ್ಟೆನೋಗೆ ಈ ಬಾರಿ ನನ್ನ ಹೆಸರನ್ನು ಪೂರ್ತಿಯಾಗಿ ಟೈಪ್ ಮಾಡುವಂತೆ ಹೇಳಿದೆ. ಆತ ಲಕ್ಷಣವಾಗಿ ಶ್ರೀಮತಿ ಜ್ಯೋತ್ಸ್ನಾ ಕುಮಾರಿ ಕಾಮತ್ ಎಂದು ಟಂಕಿಸಿ ತಂದಿಟ್ಟ. ಈ 'ಕುಮಾರಿ' ಎಲ್ಲಿಂದ ಕಾಣಿಸಿಕೊಂಡಳೋ? ಎಂದು ಕೇಳಿದೆ. "ಮ್ಯಾಡಂ! ನಮ್ಮಲ್ಲಿ ಮಹಿಳೆಯರೆಲ್ಲರ ಹೆಸರುಗಳು ಬಾಲಾ, ದೇವಿ, ರಾಣಿ, ಕುಮಾರಿಗಳಲ್ಲಿ ಕೊನೆಗೊಳ್ಳುತ್ತವೆ. ನಿಮ್ಮ ಜ್ಯೋತ್ಸ್ನಾ.ಕೆ.ಕಾಮತ್ ಎಂಬ ಪೂರ್ಣ ನಾಮಧೇಯದಲ್ಲಿ 'ಕೆ' ಎಂದರೆ ಕುಮಾರಿ ಎಂದು ತಿಳಿದುಕೊಳ್ಳಲಾರದ ಹೆಡ್ಡನೇ ನಾನು?" ಎಂದು ಪ್ರಶ್ನಿಸಿದ. 'ಕೆ' ಎಂದರೆ ಪತಿಯ ಹೆಸರಿನ ಇನೀಷಿಯಲ್ ಎಂದು ವಿವರಿಸುವದು, ಕಾಳಿಯ ಉಪಾಸಕರ ನಾಡಿನಲ್ಲಿ ಕಷ್ಟದ್ದಾಯ್ತು! ಯೋಚಿಸಿ, 'ಹಿಂದೆ ಶ್ರೀಮತಿ ಜೋಡಿಸು! ಮುಂದೆ 'ಕುಮಾರಿ' ಬೇಡ' ಎಂದು ತಿದ್ದಿ ಟೈಪ್ ಮಾಡಲು ಹೇಳಿದೆ.

ಈ ಘಟನೆಯೊಂದು ವಿನೋದವೆಂದು ಭಾವಿಸಿ ಬಂಗಾಲಿ ಸಹೋದ್ಯೋಗಿಗಳಿಗೆ ಹೇಳಿದೆ. ಒಬ್ಬಾತ. "ನಿಜಕ್ಕೂ ಜ್ಯೋತ್ಸ್ನಾ ಇದು ಗಂಡಸರ ಹೆಸರು! ನಿಮಗೆ ಹೇಗೆ ಇಟ್ಟರು? ಆದ್ದರಿಂದ ತಪ್ಪದೇ ಕುಮಾರಿ ಸೇರಿಸಿ! ಗೊಂದಲವಿಲ್ಲ" ಎಂದು ಗಂಭೀರವಾಗಿ ಹೇಳಿದ. ಉಳಿದವರೂ ಸಮ್ಮತಿ ಸೂಚಿಸಿದರು. ನಾನಾಗ ಜ್ಯೋತಿಬಸು, ಚಾರು ಮುಝುಂದಾರರ ನಾಡಿನಲ್ಲಿರುವದು ಥಟ್ಟನೆ ಅರಿವಾಯ್ತು! ಆ ಬಳಿಕ ಸುನಂದ, ಅರುಣ, ಇಂದು, ನಲಿನಿ, ಕಮಲ ವಿಮಲರೆಂಬ ಪುರುಷರನ್ನು ದಿನ ದಿನ ಕಾಣುತ್ತಿದ್ದೆ.



ದೈನಂದಿನ ಜೀವನದಲ್ಲೂ ಬಂಗಾಲಿಗಳ ಕಲಾತ್ಮಕತೆ, ಕಾವ್ಯದೃಷ್ಟಿಯನ್ನು ಹೆಜ್ಜೆಹೆಜ್ಜೆಗೆ ಕಾಣಬಹುದು. 'ಸ್ವರ-ವೀಥಿಕಾ' ಸಂಗೀತ-ಶಾಲೆಯ ಹೆಸರು. ಟೆಲಿಫೋನ ನಮಗೆ 'ದೂರವಾಣಿ' ಯಾದರೆ ಅವರಿಗೆ 'ದೂರಾಲಾಪನಿ'. ಫೋನಿನಲ್ಲೆ ಆಲಾಪ ಮಾಡುತ್ತಾರೆ. ಜಲಜೋಗ(ಜಲಯೋಗ) ಚಹದಂಗಡಿಯ ಹೆಸರು. ಚಹಕುಡಿಯುವದೂ ಅಲ್ಲಿ ಒಂದು ಯೋಗವೇ! 'ಅಭಿಸಾರಿಕಾ' ಎಂಬ ದೊಡ್ಡ ಬೋರ್ಡನ್ನು ಭವಾನಿಪುರದ ಪೇಟೆಯಲ್ಲಿ ಕಂಡು ಸೋಜಿಗವಾಯ್ತು. ಎರಡು ಮೂರು ಬಾರಿ, ಅಲ್ಲಿ ಹೋಗಲು ಯತ್ನಿಸಿ ಹಿಂಜರಿಯುತ್ತಿದ್ದೆ. ಗಂಡಸರು, ಅವರಿಗಿಂತ ಹೆಚ್ಚಾಗಿ ಹೆಂಗಸರು ಒಳಹೊರಗೆ ಬರುತ್ತಿರುವದನ್ನು ನೋಡಿ, ಧೈರ್ಯದಿಂದ ಏರ್‌ಕಂಡಿಶನ್ಡ್ ಕಟ್ಟಡ ಹೊಕ್ಕೆ. ನೋಡಿದರೆ! ಹೊಸ ವಿನ್ಯಾಸಗಳ ಬಟ್ಟೆಯಂಗಡಿ! ಆಶುನ್ ದಿದಿ! (ಬನ್ನಿ, ಅಕ್ಕ) ಎಂದು ನಗು ಮುಖದಿಂದ ಬರಮಾಡಿಕೊಂಡಾತ ಸುಂದರ ಯುವಕ.

ಮೂರು ಅಂಗಡಿಗಳಾಚೆ 'ಪಾದುಕಾ ಪ್ರತಿಷ್ಠಾನ' ಎಂಬ ಚಪ್ಪಲಿಯಂಗಡಿಯಿತ್ತು.

ಅರವತ್ತು, ವರ್ಷಗಳ ಹಿಂದೆ, ಸಂಸ್ಕೃತ ಪ್ರೇಮಿಗಳಾಗಿದ್ದ ನಮ್ಮ ತಂದೆ, ತಮ್ಮ ಹೆಣ್ಣುಮಕ್ಕಳಿಗೆ ಉಷಾ, ಜ್ಯೋತ್ಸ್ನಾ, ಸುಷಮಾ ಎಂಬ ಹೊಸ 'ಫ್ಯಾಶನ್' ಹೆಸರುಗಳನ್ನಿಟ್ಟು ಹಿರಿಯರಿಂದ ಛೀಮಾರಿ ಹಾಕಿಸಿಕೊಂಡಿದ್ದರು- ಕರೆಯಲು ಕಠಿಣವೆಂದು ನಾಲಿಗೆ ಹೊರಳುವುದಿಲ್ಲವೆಂದು. ಈಗ ಕಾಲ ಬದಲಾಗಿದೆ. ಟಿವಿ-ಚಲಚ್ಚಿತ್ರಗಳಿಂದಾಗಿ ವಿಭಿನ್ನ ಪ್ರಾದೇಶಿಕ ಹೆಸರುಗಳ ಅಂತರ ಇಲ್ಲವಾಗಿದೆ. ಬಂಗಾಲಿ, ಬಂಗಾಲೇತರ, ಉತ್ತರ-ದಕ್ಷಿಣವೆಂಬ ಭೇದವಿಲ್ಲದೇ ಎಲ್ಲೆಡೆ ಬಂಟಿ, ಪಿಂಟು, ಪಿಂಕಿ, ಚಿಂಟು, ಗುಡ್ಡಿ, ಟುಟುಲ್, ಖೋಕರು ಕಾಣಸಿಗುತ್ತಾರೆ. ನಾಮಕರಣದ ಮಟ್ಟಿಗೆ, ತಿಂಡಿಗಳ ಮಟ್ಟಿಗೆ ಭಾರತದ ಏಕೀಕರಣವಾಗಿದೆ!

# ವಿಶ್ರಾಂತಿ ಧಾಮ

ತನ್ನ ಭವಿಷ್ಯವನ್ನು ಅಮೇರಿಕೆಯಲ್ಲಿ ರೂಪಿಸಿಕೊಂಡ ನಮ್ಮ ಮಗ ವಿಕಾಸನಿಗೆ ಒಮ್ಮಿಂದೊಮ್ಮೆ ತನ್ನ ತಾಯ್ತಂದೆಗಳ ಭವಿಷ್ಯದ ವಿಚಾರ ಬಾಧಿಸಲಾರಂಭಿಸಿತು! "ಎಷ್ಟು ಬೇಡಿಕೊಂಡರೂ ಅಮೇರಿಕೆಗೆ ಬರಲು ನಿರಾಕರಿಸುತ್ತೀರಿ! ಹೊನ್ನೂರಿನ ಶಾಂತ ಪರಿಸರದಲ್ಲಿ ಇರಲೂ ಒಲ್ಲೆ ಅನ್ನುತ್ತೀರಿ! ಬೆಂಗಳೂರಿನ ಮಹಾನಗರದಲ್ಲಿ ನೀವು ಇಬ್ಬರೇ ಇರುವುದನ್ನು ನಾನು ತೀವ್ರ ವಿರೋಧಿಸುತ್ತೇನೆ!" ಒಮ್ಮೆ ರಜೆಗೆ ಬಂದಾಗ ಖಡಾಖಂಡಿತವಾಗಿ ಘೋಷಿಸಿದ.

"ಅದಕ್ಕೇನು ಮಾಡಲು ಬರುವಂತಿದೆ? ಸಬಲ ಕಾರಣವಿಲ್ಲದೇ ಊರೂರು ಬದಲಾಯಿಸುವುದು ನನಗೆ ಒಪ್ಪಿಗೆ ಇಲ್ಲ! ಮೂರು ದಶಕಗಳ ಹಿಂದೆಯೇ ಬೆಂಗಳೂರಿನಲ್ಲಿ ನೆಲಸಲು ನಿರ್ಧರಿಸಿದ್ದೆ. ಈಗ ಮನಸ್ಸು ಬದಲಾಯಿಸಲು ಯಾವ ಸಬಲ ಕಾರಣವೂ ಇಲ್ಲ!" ರಾಯರೆಂದರು.

"ಹೋಗಲಿ! ಆಗೀಗ ಬದಲಾವಣೆ ಬೇಕೇಬೇಕು. ದುಡಿದುಡಿದು ಹಣ್ಣಾಗುತ್ತಾ ಇದ್ದೀರಿ! ಬ್ರೈನ್ ಬ್ಯಾಟರಿ recharge ಮಾಡಬೇಡವೇ? ಚೆನ್ನಾಗಿ ವಿರಾಮ ಮಾಡಲು ಕಲಿಯಿರಿ. ನಿಮಗೆ ವಿರಾಮಧಾಮದ ಅವಶ್ಯಕತೆಯಿದೆ! ಬೆಂಗಳೂರಿನ ಸ್ಥಿತಿವಂತರಿಗೆಲ್ಲ ಒಂದೊಂದು ಫಾರ್ಮ್‌ಹೌಸ್ ಇದೆ. ನಿಮಗೆ ನಮ್ಮ ಊರಿನ ಶಾಂತ ಪರಿಸರದಲ್ಲಿ ವಿಶ್ರಾಂತಿಧಾಮ ಇರಲಿ" ವಿಕಾಸನೆಂದ.

"ಅದೆಲ್ಲ ಸ್ಥಿತಿವಂತರಿಗೆ ಕಣೋ! ಬಡ ನೀತಿವಂತರಿಗೆ ನಿಂತ ನೆಲ ಗಟ್ಟಿಯಾಗಿದ್ದರೆ ಅಷ್ಟೇ ಸಾಕು!" ನಾನು ಒಗ್ಗರಣೆ ಹಾಕಿದೆ.

ವಿಕಾಸ ಒಪ್ಪಲೇ ಇಲ್ಲ. "ನಿಮಗೆ ಇಲ್ಲಿ ನೆಲೆ ಗಟ್ಟಿಯಾದದ್ದನ್ನು ಯಾರೂ ಪ್ರಶ್ನಿಸಿಲ್ಲ! ನಿಮ್ಮ ಮೆಚ್ಚಿನ ಹೊನ್ನೂರಿನಲ್ಲಿ ಆತ್ಮೀಯರ ನಡುವೆ ಹಾಯಾಗಿದ್ದು ಈ ಬೆಂಗಳೂರಿನ ಗೌಜಿಯಿಂದ ವರ್ಷದ ಕೆಲ ತಿಂಗಳು ದೂರವಾಗಿರಿ!" ರಸ್ತೆಯ ಟ್ರಾಫಿಕ್ ಕಿವಿಗಡಚಿಕ್ಕಿ ಮಾತು ಕೇಳಿಸದೇ, ಗ್ಯಾಲರಿ ಬಾಗಿಲು ಹಾಕುತ್ತ ವಿಕಾಸನು ಮಾತು ಮುಂದುವರಿಸಿದ. "ನೋಡಿದೆಯಾ! ಈ ಸದ್ದುಗದ್ದಲ ವಿಪರೀತವಾಗಿ ನೀನು ಧ್ವನಿಯೇರಿಸಿ ಮಾತನಾಡುವುದನ್ನು ರೂಢಿಸಿಕೊಂಡಿದ್ದಿ! ಗೊಗ್ಗರವಾಗಿದೆ ಧ್ವನಿ! ಆರಾಮ್ ಬೇಕು. ಅಮ್ಮಾ, ನಿನ್ನ ಬಾಯಿಗೆ, ಬಾಪ್ಪಾರ ಕಿವಿಗೆ ಹಾಗೂ ಮಿದುಳಿಗೆ! ಬಾಪ್ಪಾ, ಅಮ್ಮ ಬೊಂಬಾಯಿ ಬಿಟ್ಟು ಬಂದು ದಶಕ ಕಳೆದರೂ, ಬೆಂಗಳೂರಿನ ಹೆಂಗನ್ನಡ ರೂಢಿಸಿಕೊಂಡಿಲ್ಲ! ಈಗಂತೂ ನೀವು ಒಬ್ಬರೇ ಅವರಿಗೆ ಶ್ರೋತೃ! ನಿವೃತ್ತಿಯ ಬಳಿಕ ನಿಮ್ಮ ಕಿವಿ ಹಾಗೂ ಮನಃಸ್ವಾಸ್ಥ್ಯದ ಕಾರಣದಿಂದಲಾದರೂ ವಿರಾಮಧಾಮಕ್ಕೆ ಒಪ್ಪಿಕೊಳ್ಳಿ! ನಿಮಗೆ ಒಪ್ಪಿಗೆಯಾಗುವ ವಿರಾಮ ಧಾಮವನ್ನು ನಿರ್ಮಿಸುವ ಹೊಣೆ ನನಗೆ ಬಿಡಿ" ಮಗ ಪಟ್ಟು ಹಿಡಿದ.

ನನ್ನ ಬಾಯಿಯ, ಚಿರಪರಿಚಯವಿದ್ದ ರಾಯರು, ಬಾಯ ಉಪಚಾರಕ್ಕೆ ಸಹಾ

ಮಾತನಾಡದೇ ಸುಮ್ಮನಿರಬೇಕೇ? ಅವರ ಮೌನವನ್ನೇ ಅನುಮತಿಯೆಂದು ಗ್ರಹಿಸಿ ವಿಕಾಸನು ಹೊನ್ನೂರಿಗೆ ಯಾತ್ರೆ ಬೆಳೆಸಿದ.

ಊರಲ್ಲಿ ಆತ್ಮೀಯರು, ಪರಿಚಿತರು ನೋಡಿ ಕೇಳಿ ಬಲ್ಲವರೊಡನೆ ಆದರ್ಶ ವಿಶ್ರಾಂತಿಧಾಮದ ಚಿತ್ರ ಅವರಿಗೆ ಕೊಡಲು ಯತ್ನಿಸಿದ.

ಊರಿನಿಂದ ದೂರವಿದ್ದು, ತೆಂಗಿನ ತೋಟದ ಸಮೃದ್ಧ, ಶಾಂತ ಪರಿಸರದ ನಡುವೆ ಒಂಟಿ ಮನೆಯಿರಬೇಕು. ಹೊನ್ನೂರು, ನದಿ–ಸಮುದ್ರ–ಸಹ್ಯಾದ್ರಿಗಳನ್ನು ಹೊಂದಿದೆ! ದಿನದ ಮೂರೂ ಅವಧಿಗಳಲ್ಲಿ ಮೂರರ ದರ್ಶನ ಲಭ್ಯವಿರಬೇಕು.

ಪ್ರಾತಃಕಾಲ, ಸಾಯಂಕಾಲ ಸೂರ್ಯನ ಉದಯ ಅಸ್ತಗಳಂತೂ ಸರಿ. ತೆಂಗಿನಗರಿಗಳ ನಡುವಿನಿಂದ ಸೂರ್ಯ–ಚಂದ್ರಕಿರಣಗಳು ಮನೆಯನ್ನು ಮುತ್ತಿಡಬೇಕು. ಅಟ್ಟದ ಮೇಲಿಂದ ಸಹ್ಯಾದ್ರಿಯ ಒಂದೆರಡು ಶಿಖರಗಳು ಗೋಚರಿಸಬೇಕು.

ಹಳ್ಳಿಗರ ನಿತ್ಯದರ್ಶನ, ನಿಜದರ್ಶನ ಒದಗಬೇಕು. ಹಳ್ಳಿಗರ, ಹಕ್ಕಿಪಕ್ಕಿ, ಪಶುಪ್ರಾಣಿಗಳ ಛಾಯಾಚಿತ್ರಜೀವನ, ಬಾಪ್ಪಾರಿಗೆ ಪಂಚಪ್ರಾಣ! ಅವರಿಗೆ ಮೊದಲಿನಂತೆ ಓಡಾಟ ಸಾಧ್ಯವಿಲ್ಲ. ಮನೆಯಿಂದಲೇ ಕ್ಲಿಕ್ಕಿಸಲು ಅನುಕೂಲವಿರಬೇಕು. ಶರಾವತಿಯಲ್ಲಿ ನೌಕಾವಿಹಾರಕ್ಕೆ ಆಗೀಗ ಹೊರಡುವ ಎಲ್ಲ ಸೌಕರ್ಯಬೇಕು!

ಸರಿ, ವಿಕಾಸನ ಸರಿವರಯದ ಸ್ನೇಹಿತರು ಇಂಥ ತಾಣವೊಂದರ ಹುಡುಕಾಟಕ್ಕೆ ತೊಡಗಿದರು. NRI ಕಾಮತನೊಬ್ಬ ಊರಲ್ಲಿ ಮನೆ ತಪ್ಪಿದರೆ ಸೈಟ್ ಕೊಳ್ಳಲಿದ್ದ ವಿಚಾರ ಬಲುಬೇಗ ಹರಡಿತು. ರಾತ್ರಿ ಬೆಳಗಾಗುವದರಲ್ಲಿ ಹಳೆಮನೆ, ಖಾಲಿಸೈಟು, ಕಾಡುಕೊಪ್ಪಲು, ಅನಾಥ ಹಕ್ಕಲು, ಎಲ್ಲವೂ ಘನವಾದ ಬೆಲೆ ಹೊತ್ತು ಮಾರಾಟಕ್ಕೆ ಸಿದ್ಧವಾಗಿ ನಿಂತವು. ಹಳೆ ಇಸ್ಪೇಟುಗಳ ಹೊಸ ವರ್ಣನೆ ಹಾಗೂ ಹೊಚ್ಚ ಹೊಸ ರೇಟ್ ಕೇಳಿ ವಿಕಾಸ ಬೇಸತ್ತ. "ನೀವೇ ಬಂದು ನೋಡಿ! ಸೂರ್ಯಕಿರಣಗಳು ದಂಡಿಯಾಗಿವೆ!" "ಬರೇ ಅಡಿಗೆ ಮನೆಗೆ ಸೂರ್ಯ ಪ್ರಕಾಶ ಮೀಸಲಿದೆಯಲ್ಲ?" ಎಂದರೆ "ಈಗ ವಾಸ್ತು ಹಾಗಿರಬೇಕು, ಹೀಗಿರಬೇಕು! ಎಂದು ಫಾರಿನ್‌ರಿಟರ್ನ್ಡ ಜನ ನಂಬಿದ್ದಾರಲ್ಲ? ನಿಮ್ಮ ಗ್ರಹಗತಿಗೆ ಬೇಕಾದಂತೆ ಮನೆಯ ಮೂಲೆ ಬದಲಾಯಿಸಿ!" ಅದ್ಭುತ ಸಲಹೆ ಬಂದಿತು.

ಸೂರ್ಯಾಸ್ತದ ದರ್ಶನಕ್ಕೆ ಆಗ್ರಹದಿಂದ ಬಂದ ಕರೆಯನ್ನು ಮನ್ನಿಸಿ ಇನ್ನೊಂದು ಮನೆಗೆ ಹೋಗಿ, ಮನೆ, ಹಿತ್ತಲು ನೋಡಿದ್ದಾಯ್ತು. "ಬರೆ ಮನೆಗೆ ಮಾತ್ರ ಶರಾವತಿ ದರ್ಶನ ಮೀಸಲಿದೆ ಎಂದು ಭಾವಿಸಬೇಡಿ! ಪ್ರಾತರ್ವಿಧಿಗೆ ಹೋದರೂ ನದಿ ಕಾಣಿಸುತ್ತದೆ!" ಎಂದು ಮನೆಯ ಹಿಂದೆ ಗಲೀಜು ನೀರೆಲ್ಲ ನದಿಗೇ ಹೋಗುವಂತೆ ಕಟ್ಟಿದ ಕಕ್ಕಸುಗಳ ದರ್ಶನವನ್ನೂ ಮನೆಯಾತ ಮಾಡಿಸಿದ. "ತೆಂಗಿನ ಮರಗಳೆಲ್ಲ ಬೆಳೆದಿವೆ! ಮನೆ ಪಸಂದಾಗಿದೆಯಲ್ಲ! ಏನು ಹೇಳುತ್ತೀರಿ?" ಎಂದು ಸ್ಕೂಟರ್ ಹತ್ತಿ ಹಿಂದಿರುಗುವವರೆಗೂ ಪೀಡಿಸಿದ.

ಮೂರನೇ ಮನೆಯ ದಣಪೆಯ ಹತ್ತಿರ ಮಹಿಳೆಯೋರ್ವಳು, ಇವನ ಬರವನ್ನೇ ಕಾಯುತ್ತ ನಿಂತಿದ್ದಳು. "ನಮ್ಮ ಮನೆಯಿಂದ ಸಮುದ್ರ ಕಾಣಿಸದಿದ್ದರೆ ಏನಂತೆ? ಪರ್ವತ ದರ್ಶನಕ್ಕೆ ಕಮ್ಮಿ ಇಲ್ಲ!" ಎಂದು ಮನೆ ಹಿಂದಿನ ಬೋಳುಗುಡ್ಡ ತೋರಿಸಿದಳು. "ಉಳಿದವರಿಗಿಂತ ನಮ್ಮ ಹಿತ್ತಿಲಲ್ಲಿ ಆರು ತೆಂಗಿನ ಸಸಿ ಜಾಸ್ತಿ ಇವೆ! ಕಲ್ಪವೃಕ್ಷ ವನವನ್ನೇ ನಿಮಗೆ ಬಿಟ್ಟು ಕೊಡುತ್ತಿದ್ದೇನೆ!" ಎಂದಳು.

ಎದುರಿಗೇ ದನದ ಕೊಟ್ಟಿಗೆ. ಜೋಂಯ್! ಎಂದು ಗುಂಗಾಡು ನೊಣಗಳ

ಪರದೆಯೇ ಎದ್ದಿತ್ತು. ಕೈಯಿಂದ ಝಾಡಿಸುತ್ತ ಸೌಜನ್ಯವನ್ನು ಅಮೇರಿಕನ್ನರಿಂದ ಕಲಿತ ವಿಕಾಸನು,"ಮನೆ ಹಿತ್ತಿಲು ಚೆನ್ನಾಗಿದೆ! ಕೀಟಕೋಟಿಯೂ ಪುಷ್ಕಳವಾಗಿದೆ! ಆದರೆ ಹಕ್ಕಿ ಪಕ್ಕಿ ಪ್ರಾಣಿ!" "ರಾತ್ರಿಯಾದೊಡನೆ ಗೂಗೆ, ಜೀರುಂಡೆ, ಕಣ್ಣುಕಪ್ಪಡಿ, ಕಬ್ಬೆಕ್ಕು ಬರುತ್ತವೆ!" ಮನೆಯೊಡತಿ ಕೂಡಲೇ ಆಶ್ವಾಸನೆಯಿತ್ತಳು.

"ಈ ಕೊಟ್ಟಿಗೆ?"

"ಅರೇ ಬಾಬಾ! ನಿಮ್ಮ ಕಾರಿಗೆ ಗ್ಯಾರೇಜ್ ಬೇಡವೇ? ಕೊಟ್ಟಿಗೆಯನ್ನೇ ಗ್ಯಾರೇಜ್ ಮಾಡಿ ಪರಿವರ್ತಿಸಬಹುದು"

"ಸರಿ ಎಷ್ಟನ್ನು ನಿರೀಕ್ಷಿಸುತ್ತೀಯಾ?"

"ಹದಿನೈದು ಲಕ್ಷ!" ಹಿಂದೆ ಮುಂದೆ ನೋಡದೇ ಹೇಳಿದಳು ಒಡತಿ. ಯೋಚಿಸಿ ಹೇಳುತ್ತೇನೆಂದು ಹೊರಬಿದ್ದವನಿಗೆ ನಾಲ್ಕು ವರ್ಷದಿಂದ ಆ ಮನೆ ಮಾರಾಟವಾಗದೇ ಉಳಿದ ವಿಚಾರ ಇತರರಿಂದ ತಿಳಿಯಿತು. ಕಲ್ಪವೃಕ್ಷಗಳ ಭಾಗ ಈಗಾಗಲೇ ಇನ್ನೊಬ್ಬರ ಪಾಲಿಗೆ ಹೋಗಿದೆ. ಕೊಟ್ಟಿಗೆ ಭಾಗ ಮಾತ್ರ ಉಳಿದಿದೆ! ಎಂದು ತಿಳಿಯಿತು.

ವಿಕಾಸನ ಕನಸಿನ ಮನೆಗೆ ಒಂದು ವಾರದಿಂದ ಸುತ್ತಿ ದಣಿದ ಮಿತ್ರ ದೀನು ಸಂತಸದ ಸುದ್ದಿ ತಂದ. "ನಿನ್ನ ಸಲುವಾಗಿಯೇ 'ನಂದನವನ' ಇಸ್ಟೇಟ್ ಇದೆ ಕಣೋ! ಊರಿನವರಾದ ನಾವೇ ನೋಡಿಲ್ಲ ಎಂದು ಹಳಹಳಿಸುವಂತೆ ಆಗಿದೆ. ಮಾಲಕ ನಿಮ್ಮಪ್ಪನ ಕ್ಲಾಸ್‌ಮೇಟಂತೆ! ಕಸಬಾ ಗಂಡುಮಕ್ಕಳ ಸಾಲೆಯಲ್ಲಿ. ಅಣ್ಣಪ್ಪನ ಎಣ್ಣೆ ಬಿಸನೆಸ್ ಉಂಟಲ್ಲ? ಅವನೇ!"

"ತೆಂಗಿನ ತೋಟ ಉಂಟಲ್ಲ?"

"ಉಂಟು! ಸೂರ್ಯಾಸ್ತ, ಸೂರ್ಯೋದಯ, ಭೋರ್ಗರೆಯುವ ಸಮುದ್ರದ ದೂರದರ್ಶನ, ನದಿಯ ಹರಿನೀರು, ಗುಡ್ಡೆಪಡ್ಡೆ, ಹಳ್ಳಿ ಜನ ಎಲ್ಲಾ ಉಂಟು!" ಈಗಾಗಲೇ ಕಂಠಪಾಠವಾಗಿದ್ದ ಸಾಲುಗಳನ್ನು ದೀನು ಉಚ್ಚರಿಸಿದ.

"ಹಕ್ಕಿ ಪಕ್ಕಿ-ಪಶು ಪ್ರಾಣಿ?"

"ಅದೊಂದನ್ನು ಪತ್ತೆ ಹಚ್ಚಲಾಗಲಿಲ್ಲ! ನಾಳೆ ಬೆಳಿಗ್ಗೆ ಖುದ್ದಾಗಿ ಹೋಗಿ ನೋಡಿ ಕೊಂಡು ಬರೋಣ. 20 ಲಕ್ಷ ಎಂದ. ದೋಸ್ತನಿಗೆಂದು ಕೊಂಚ ರಿಯಾಯತಿ ಉಂಟಂತೆ. ಮಾರಾಟದ ಬಗ್ಗೆ ಯಾರಿಗೂ ಹೇಳಬೇಡ ಎಂದು ಬಜಾಯಿಸಿ ಹೇಳಿದ್ದಾನೆ ಅಣ್ಣಪ್ಪ ಪೈ. ತಾನೇ ತೋಟ ಮನೆ ಸುತ್ತ-ಮುತ್ತ ತೋರಿಸುತ್ತಾನೆ. ಹಾಂ...ತೋಟದ ಪಾಗಾರದ ದಕ್ಷಿಣ ತುದಿಗೆ ಶರಾವತಿ! ತುಂಬ ಹಿಂದೆ ದೋಣಿ ನಿಲ್ಲುತ್ತಿದ್ದ ಧಕ್ಕೆಯೂ ಇದೆ"

ವಿಕಾಸನ ಕಿವಿ ನೆಟ್ಟಗಾದವು.

"ನೌಕಾವಿಹಾರದ ವಿಚಾರವನ್ನೂ ನೆನಪಿಟ್ಟಿದ್ದಕ್ಕೆ ತುಂಬ Thanks! ಆಗಾಗ ದೋಣಿಯಲ್ಲಿ ಅಕ್ಕಪಕ್ಕದ ಕುರ್ವೆ-ಕೋಡಗಳಿಗೆ ಹೋಗಬಹುದು. ಅಣ್ಣಪ್ಪ ತಾನಾಗಿ ನಮಗೆ ಎಲ್ಲವನ್ನು ತೋರಿಸಿಕೊಂಡು ಬರುವ ಮೊದಲು, ನಾವೇ ಒಂದು ಸುತ್ತು ಹಾಕಿಬರೋಣ. ರಸ್ತೆ, ಜಾಗ ಸರಿಯಾಗಿ ಗೊತ್ತಲ್ಲ?"

"ಓಹೋ! ಇದೇನು ನಿನ್ನ ಬೆಂಗಳೂರೇ? ಬರ್ಮಿಂಗ್ ಹ್ಯಾಮೇ? ರಸ್ತೆ ತಪ್ಪಿಸಿಕೊಳ್ಳಿಕ್ಕೆ! ಎಡವಿದರೆ ಗುಡ್ಡ, ಮುಗ್ಗರಿಸಿದರೆ ನದಿ. ನಮ್ಮೂರು ಹೊನ್ನೂರು" ಮೀರಿದ ಅಭಿಮಾನದಿಂದ ದೀನು ನುಡಿದ.

ಮಾತಾಡಿಕೊಂಡಂತೆ, ಮರುದಿನ ಆರುಗಂಟೆಗೇ ಕಗ್ಗತ್ತಲ್ಲಿ ಅರೆನಿದ್ರೆಯಿಂದೆಚ್ಚೆತ್ತು

ತಯಾರಾಗಿ ಸ್ನೇಹಿತರೀರ್ವರೂ ಸ್ಕೂಟರ್ ಏರಿ 'ನಂದನವನ'ದ ದರ್ಶನಕ್ಕೆ ಹೊರಟರು. ಎಲ್ಲಿಂದಲೋ ಬೊಗಳುತ್ತ ಬಂದ ಎರಡು ಬೀದಿನಾಯಿಗಳಿಗೆ ಇನ್ನೆರಡು ಸೇರಿಕೊಂಡವು. ಅವನ್ನು ತಪ್ಪಿಸಲು ವಾಹನ ತಿರುವಿದಾಗ ರಸ್ತೆಯಲ್ಲಿ ಎದ್ದ ಕಲ್ಲುಗಳು ಸಾರಥಿ, ಅಭಿಸಾರಥಿಗಳನ್ನು ಎತ್ತಿ ಬೀಳಿಸಿದವು. ಬಿದ್ದ ಸದ್ದು, ಉದ್ಗಾರಗಳಿಗೆ ಹೆದರಿ ನಾಯಿಗಳು ಪಲಾಯನ ಮಾಡಿದವು. ಪೆಟ್ಟಾಗದಿದ್ದರೂ, ಮುಖಭಂಗವಾದ ಈರ್ವರು ಸರಕಾರಕ್ಕೆ, ಮುನ್ಸಿಪಾಲ್ಟಿಗೆ, ಕೆಇಬಿಗೆ, ರಸ್ತೆಗೆ ಶಾಪ ಹಾಕುತ್ತ ಮುಂದುವರಿದರು.

ಕಗ್ಗತ್ತಲ ಗುಹೆಯಂತಿದ್ದ ತೋಟದ ಮೂಲೆಗೆ ಬಂದು ದೀನು, ವಿಕಾಸರು ಸಾವಕಾಶ ಇಳಿದರು. "ಬೆಳಗಾಗಲಿ! ಕ್ಯಾಮರಾ ತಂದಿದೀನಿ. ಹಕ್ಕಿಪಕ್ಕಿ, ಸಾಮಾನು ಹೊತ್ತ ಹಳ್ಳಿಗರು ಗೌಡತಿಯರು, ಸೂರ್ಯೋದಯಗಳನ್ನೆಲ್ಲ ಕ್ಲಿಕ್ಕಿಸ್ತೀನಿ! ಬಾಪ್ಪಾರನ್ನು ಒಪ್ಪಿಸಲು ಫೋಟೋಗ್ರಾಫಿಕ್ ಎವಿಡೆನ್ಸ್ ಒಂದೇ ಉಪಾಯ" ಪಿಸುಮಾತಿನಲ್ಲಿ ವಿಕಾಸ ಹೇಳಿದ. ನದಿಗೆ ಹೊಂದಿ ಇದ್ದ, ಬಿದ್ದು ಹೋದ ಪಾಗಾರದ ಸಮತಟ್ಟಾದ ಜಾಗ ಹುಡುಕಿ ಕುಳಿತುಕೊಳ್ಳಲು ಹವಣಿಸಿ ಹಾವು–ಚೇಳುಗಳಿವೆಯೇ? ಎಂದು ಪರಿಶೀಲಿಸಲು ಟಾರ್ಚ್ ಬೆಳಕು ಬಿಟ್ಟರು!

"ಎಲಾ ಇವರ ಮಂಜಾಳ ಹೋಗಾ! ನಸಕನಾಗ ಬೈಲ ಕಡಿಗಂತ ಹೀಂಗ ಬಂದ್ರ ಬೆನ್ನತ್ತಿ ಬಂದಾವಲ್ಲೋ! ಇಲ್ಲಾ ಬಗಳೋ ನಾಯಿ, ಇಲ್ಲಾ ಬ್ಯಾಟ್ರಿ ಬಿಡೋ ಮನಶಾರು! ಯಾವಾಕಿ ಬಡಿವಾರದಾಕಿ, ಬಂದಾಳಂತ ಬ್ಯಾಟ್ರಿ ಬಿಡ್ತಾರ!" ಪಾಗಾರದಾಚೆಯ ನದೀತೀರದ ಪ್ರಶಸ್ತ ಜಾಗವನ್ನು ಪ್ರಾತರ್ವಿಧಿಗೆ ಬಳಸುತ್ತಿದ್ದಾತನ ಏಕಾಗ್ರತೆಗೆ ಭಂಗ ಬಂದಿತ್ತು. ಬೈಯುತ್ತ ಎದ್ದು ನಿಂತ. ಜೊತೆಗೆ ಇದ್ದ ಇನ್ನೀರ್ವರು ವಿಚಲಿತರಾಗದೇ ತಮ್ಮ ಹಕ್ಕಿನ ಸ್ಥಳದಲ್ಲಿ ಕುಳಿತೇ ಇದ್ದರು. "ಹುಡುಗ್ರೇಳು! ನಮಗೇನು ಮಾಡ್ತಾವು?" ಉದ್ಗಾರದೊಂದಿಗೆ ಚಟುವಟಿಕೆ ಮುಂದುವರಿಯಿತು.

ಕಕ್ಕಾವಿಕ್ಕಿಯಾದ ವಿಕಾಸನಿಗೆ "ಕನ್‌ಸ್ಟ್ರಕ್ಷನ್ ಕೆಲಸಗಾರರು ಕಣೋ! Harmless People" ದೀನು ಸಾಂತ್ವನ ಹೇಳಿದ. "ನಿಧಾನವಾಗಿ ಬಾ ಪಾಗಾರದ ಆ ತುದಿಯಲ್ಲಿ ಕೂಡ್ರೋಣ. ಸೂರ್ಯೋದಯಕ್ಕೆ ತಡವಿಲ್ಲ" ಎಂದ. ಜೀರುಂಡೆಗಳ ಸಂಗೀತ ಜೊತೆ ಕೊಡುತ್ತಿತ್ತು.

ಬೆಳಕಾಗುತ್ತಿದ್ದಂತೆ, ಊರಜನ ಹಳ್ಳಿ ಜನ ಕಾಣಿಸಿಕೊಂಡರು, ಆದರೆ ಹಾಲಿನ್ ಕ್ಯಾನ್ ಇಲ್ಲ, ತರಕಾರಿ ಬುಟ್ಟಿ ಇಲ್ಲ, ಮೀನು–ಮೊಟ್ಟೆ ಹೊತ್ತು ಅಲ್ಲ. ಒಬ್ಬೊಬ್ಬರಾಗಿ ಬಂದು ಕಟ್ಟಡ ಕೆಲಸಗಾರರು ಕೈಕೊಂಡ ಕೆಲಸದಲ್ಲಿ ಭಾಗಿಗಳಾಗಿ ಶರಾವತಿಗೆ ಯಥಾಶಕ್ತಿ ಸೇವೆ ಸಲ್ಲಿಸಿದರು–ಸರ್ವ ಸಮಾನತಾ ಭಾವದಲ್ಲಿ.

"ಊಫ್! ಊರವರು ಒಕ್ಕಟ್ಟಾಗಿ ಮಾಡುವ ಕೆಲಸ ಇದೊಂದೇ ಎಂದು ಕಾಣುತ್ತದೆ!" ವಿಕಾಸನೆಂದ. ತೋಟದ ಅಂಚಿನಿಂದ ನಡೆಯುತ್ತ ಎಡಗಡೆ ಬಂದರು. ಮಾಂಸ ಸುಟ್ಟವಾಸನೆ. ದೂರದಲ್ಲಿ ಹೊಗೆ ಸುತ್ತಿ ಮೇಲೇರುತ್ತಿತ್ತು. "ಅಯ್ಯೋ! ಸ್ಮಶಾನ ಕಾಣಿಸುತ್ತದೆ. ಲೋ ದೀನು! ಸಹ್ಯಾದ್ರಿ ಶಿಖರ ದರ್ಶನ ಮಾಡಿಸ್ತೀನಿ ಅಂತ ಸ್ಮಶಾನ ದರ್ಶನ ಮಾಡಿಸಿದಿಯಲ್ಲೋ! ನದಿ ಬೇಕು ಎಂದರೆ ಸಂಡಾಸಾಗಿರುವ ನದೀ ತೀರಕ್ಕೆ ಕರೆತಂದೆ. ಈಗ ಬೆಳಗಾಗುವ ಮೊದಲೇ ಮಸಣಕ್ಕೆ ಬರೋ ಹಾಗೆ ಮಾಡಿದೆ!" ವಿಕಾಸ ತಾಳ್ಮೆಗೆಟ್ಟ. ಜನರು ಆ ಈ ನೆವದಿಂದ ಆಕ್ರಮಿಸುತ್ತ ಬಂದ ಜಮೀನಿನಿಂದಾಗಿ ರುದ್ರಭೂಮಿ ಕುಗ್ಗುತ್ತ ಈಗ 'ನಂದನವನ'ದ ತುದಿಗೆ ನಿಂತಿತ್ತು.!

"ಸಿಟ್ಟಾಗಬೇಡ, ಗುರು! ಹೊನ್ನೂರಿನ ಸುಪ್ರಸಿದ್ಧ ಸೀಗಲ್, ಇರುಳು ಕಬ್ಬಾರೆ, ಬೆಳ್ಳಕ್ಕಿಗಳ ಸಾಲಿನ ಫೋಟೋಗಳನ್ನೆಲ್ಲ ನಿಮ್ಮಪ್ಪ ಹೋದ ಸಲ ಬಂದಾಗ ಇದೇ ಸ್ಪಾಟ್‌ದಿಂದ ತೆಗೆದದ್ದು! ತಾಳಿಕೋ ತಾಳಿದವ ಬಾಳಿಯಾನು!" ತನ್ನ ಪ್ರತಿಷ್ಠೆ ಪೋಲಾಗದಂತೆ ದೀನು ಯತ್ನಿಸಿದ.

ತೆಂಗಿನ ತೋಟ, ಆರೈಕೆ, ಗೊಬ್ಬರ ನೀರು ಇಲ್ಲದೇ ಸೊರಗಿ ನಿಂತಿತ್ತು. "ಆಳು ಇಟ್ಟು ಬೇಕಾದ ಹಣ್ಣು-ಹೂವಿನ ಗಿಡ-ಮರಗಳ ತೋಟವನ್ನು ನೀನೇ ನಿರ್ಮಿಸಬಹುದು!" ದೀನು ಸಂತೈಸಿದ. ಹೋಗುತ್ತ ಶವಕೊಳೆತ ದುರ್ವಾಸನೆ ಮೂಗು ಸೀಳಿತು. ಫಡಫಡ ಸದ್ದು! ಮೋಡಗಳು ಬಂದು ನೆಲ ಬಡೆದಂತೆ ರಫ್-ಧೋಪ್ ಸದ್ದು. ಇಬ್ಬರೂ ಹಿಂದೆ ಸರಿದರು. ಹದ್ದು ರಣಹದ್ದುಗಳು ಪಾಗಾರದಾಚೆ ಬಿದ್ದ ಸತ್ತ ಕರುವಿನ ಭೋಜನಕ್ಕಾಗಿ ಸಮರ ಸನ್ನದ್ಧವಾಗಿವೆ! ಕಾಗೆಗಳೂ ಸುರಕ್ಷಿತ ದೂರದಲ್ಲಿ ಕಾಯುತ್ತಿವೆ!

"ಅಪರೂಪದ ಪಕ್ಷಿಕೋಟಿಯ ದರ್ಶನ ಆಯಿತುಬಿಡು!" ಇನ್ನೂ ಸಿಟ್ಟಿನಲ್ಲಿದ್ದ ವಿಕಾಸ ಹೇಳಿದ.

"ನೌಕಾ ವಿಹಾರ ಬೇಕು ಅಂದಿದ್ದಿಯಲ್ಲ? ಇಕೋ! ಮೊದಲು ಇದ್ದ ಧಕ್ಕೆ, ಹಾಂ ಸಾವಕಾಶ!" ಅವನು ಎಚ್ಚರಿಸುವದರೊಳಗೇ ಪಾಚಿಗಟ್ಟಿಕೊಂಡ 'ಧಕ್ಕೆ'ಯ ಕಲ್ಲಿನ ಮೇಲೆ ಕಾಲು ಜಾರಿ ವಿಕಾಸ ನೀರಿಗೆ ಬಿದ್ದ. ಆದರೆ, ಜಾಸ್ತಿ ನೀರಿರದೇ ಮತ್ತು ನೀರು, ಪೆಟ್ಟು ತಗಲದೇ ಜೀನ್ಸ್ ಪ್ಯಾಂಟ್ ರಕ್ಷಣೆ ಕೊಟ್ಟಿತು. ಕತ್ತ, ಸೊಪ್ಪು, ಒಣಮೀನು ಹೊತ್ತು ತರುತ್ತಿದ್ದ ನಾಡದೋಣಿಗಳು ಕಂಡವು. ಜೊತೆಗೆ ಮತ್ಸ್ಯಗಂಧಿಯರು!

"ನೈಸರ್ಗಿಕ ಸೌಂದರ್ಯ ಕಂಡಾಯ್ತು! ಮಾನವನ ಸಹಜಪ್ರವೃತ್ತಿಗಳ ನಗ್ನ ದರ್ಶನವಾಯ್ತು! ಅಪರೂಪದ ಕೀಟಕೋಟಿ, ಪಕ್ಷಿ-ಪ್ರಪಂಚ ಸ್ವಾಗತ ಕೋರಿದ್ದಾಯ್ತು. ಬೋಟಿಂಗ್ ಮತ್ತು ಪಿಕ್‌ನಿಕ್ ಸ್ಪಾಟ್ ನೋಡಿಯೂ ಆಯ್ತು! ತಿರುಗಿ ಹೋಗೋಣ!" ಎಂದು ಒಂದೇ ಸವನೆ ಕಚ್ಚುತ್ತಿದ್ದ ದೈತ್ಯಾಕಾರದ ಸೊಳ್ಳೆಗಳನ್ನು ಓಡಿಸುತ್ತ ವಿಕಾಸನೆಂದ.

ಬೆಂಗಳೂರಿಗೆ ಹಿಂದಿರುಗಿದರೂ ವಿಕಾಸನ ಸಂತಾಪ ಆರಲಿಲ್ಲ.

"ಹೋಗಲಿ ಬಿಡೋ! ಬೆಂಗಳೂರು ಇನ್ನೇನು ಸಿಂಗಪುರ್ ಆಗಲಿದೆ. ಕಲುಷಿತ ವಾತಾವರಣ, ಶಬ್ದಮಾಲಿನ್ಯ ನೀರು-ವಿದ್ಯುತ್ ಕೊರತೆ ಮಾಯವಾಗಿ ಶಾಂತ ಪರಿಸರ ಇಲ್ಲಿಯೇ ನಿರ್ಮಾಣವಾಗಲಿದೆ! ಬೆಂಗಳೂರೇ ವಿರಾಮಧಾಮ ಆಗಲಿದೆ, ನಮಗಷ್ಟೇ ಅಲ್ಲ ಇಡೀ ಭಾರತಕ್ಕೇ!" ಎಂದು ಮಗನಿಗೆ ಸಮಾಧಾನ ಹೇಳಿದೆ. ■

# ರೋಮ್ಯಾಂಟಿಕ್ ರವಕೆ

ತೀರ ಇತ್ತೀಚೆಗೆ, ಮುಂಬೈಯ ಪತ್ರಕರ್ತೆಯೊಬ್ಬಾಕೆ ಫೋನಿಸಿ ನನ್ನಿಂದ ರವಕೆ, ಉರ್ಫ್ ಚೋಲಿ, ಅಥವಾ ಕುಪ್ಪಸ ಕುರಿತಾದ ಹಿಂದಿನ, ಇಂದಿನ, ಮುಂದಿನ ಸ್ವರೂಪವನ್ನು ತಿಳಿಯಬಯಸಿದಳು. ಆಕೆ ವಿಚಾರಿಸಲು ಸಬಲ ಕಾರಣವೂ ಇತ್ತು. ನಮ್ಮ ಕುಟುಂಬದ ವೆಬ್‌ಸೈಟ್ ಆದ www.kamat.com ನಲ್ಲಿ ಸೀರೆ ಮತ್ತು ಅದರ ಎಡಬಿಡದ ಸಂಗಾತಿ, ಕುಪ್ಪಸದ ಕುರಿತ ನನ್ನ ಸಚಿತ್ರ ಲೇಖ ಓದಿ ಆಕೆ ಪ್ರಭಾವಿತಳಾಗಿದ್ದಳು. ಮ್ಯಾಕ್ಸಿ, ಮಿಡಿ, ಜೀನ್ಸ್-ಟೀಶರ್ಟ್ ಸಲ್ವಾರ್-ಕಮೀಜ್, ಚೂಡಿದಾರ್-ಟಾಪ್‌ಗಳ ಆಧುನಿಕ ಯುಗದಲ್ಲಿ ಭರದಿಂದ ಚರಿತ್ರೆಗೆ ಸೇರಿ ಹೋಗಲಿರುವ ಸೀರೆ ಸಂಗಾತಿ, ರವಕೆಯ ಕುರಿತಾಗಿ ಆಕೆ ತಾಳಿದ ಕುತೂಹಲ ಚರಿತ್ರೆಯ ವಿದ್ಯಾರ್ಥಿನಿಯಾದ ನನಗೆ ಸಂತಸ ಕೊಟ್ಟಿತೆಂದು ಬೇರೆ ಹೇಳಬೇಕೇ? "ಚೋಲಿಕೆ ಪೀಛೆ (ಕಿ ಕಹಾನಿ) ಕ್ಯಾಹೈ?" ಎಂದು ಗಂಭೀರವಾಗಿ ಪ್ರಶ್ನಿಸಿದಾಕೆಯ ಕುತೂಹಲ ತಣಿಸಲು ಹೆಣಗಿದೆ. ಅರ್ಧಗಂಟೆಗೂ ಮೀರಿ ಫೋನ್ ಮೂಲಕ ನನ್ನನ್ನು ಕೊರೆಯಹಚ್ಚಿದ, ಅಲ್ಲಲ್ಲ, ಹೊಲಿಯಲು ಹಚ್ಚಿದ 'ಫೋನಿ' ಹರಟೆಯ ತೇಪೆ ಭಾಗವನ್ನು ನಿಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದೇನೆ.

ತೀರ ಪ್ರಾಚೀನ ಕಾಲದ ಗ್ರೀಕರಿಂದ ಹಿಡಿದು ಬ್ರಿಟಿಶರವರೆಗೆ ಆಗಾಗ ಭಾರತಕ್ಕೆ ಬರುತ್ತಿದ್ದ ವಿದೇಶೀಯ ಪ್ರವಾಸಿಗಳು ಗಮನಿಸಿದ ಅಂಶವೆಂದರೆ, ಭಾರತೀಯರಿಗೆ ಹೊಲಿದ ಬಟ್ಟೆಗಳೇ ಗೊತ್ತಿಲ್ಲ! ಎಂದು. ಕೇವಲ ಮಾರುಗಟ್ಟಲೆ ಬಟ್ಟೆಯಿಂದ ಗಂಡಸರು, ಹೆಂಗಸರು ಮೈ ಮುಚ್ಚಿಕೊಳ್ಳುತ್ತಾರೆ ಎಂದು. ನಮ್ಮ ಉಷ್ಣ ಹವೆಗೆ ಸರಿಹೋಗುವ ಉಡುಪನ್ನು ಸಹಸ್ರಾರು ವರ್ಷಗಳ ಹಿಂದೆ ಕಂಡುಹಿಡಿದ ನಮ್ಮ ಹಿರಿಯರ ವ್ಯಾವಹಾರಿಕತೆಯನ್ನು ಅವರು ಗಮನಿಸಲಿಲ್ಲ. ಬಟ್ಟೆ ಬರೆಯೆಂಬುದು ಆಯಾ ಪ್ರದೇಶದ ಹವಾಮಾನವನ್ನು ಅವಲಂಬಿಸಿರುತ್ತದೆ. ಅತ್ಯಂತ ಚಳಿಯ ಹಿಮಾಲಯದ ನಾಡುಗಳ ಉಡಿಗೆ-ತೊಡಿಗೆ, ದಕ್ಷಿಣಭಾಗದ ಕರಾವಳಿಯ ಪ್ರದೇಶಕ್ಕೆ ಸರಿಹೋಗಲಾರದು. ಅದರಂತೆ ಕೇರಳದ ಮುಂಡುವೇಷ್ಟಿ ಹಿಮಾಚಲ ಪ್ರದೇಶದ ಸುಂದರಿ, ಉಟ್ಟರೆ ಥಂಡಿಗೆ ಮರಗಟ್ಟಿ ಹೋದಾಳು! ಹೇರಳವಾಗಿ ಹತ್ತಿ ಬೆಳೆಯುತ್ತಿದ್ದ ಭಾರತದ ಹೆಚ್ಚಿನ ಭಾಗದಲ್ಲಿ ಹಗುರವಾಗಿ ಧರಿಸಬಹುದಾಗಿದ್ದ ಧೋತರ-ಅಂಗಿ, ಸೀರೆ ಕುಪ್ಪಸಗಳು ಶತಶತಮಾನಗಳಲ್ಲಿ ದೈನಂದಿನ ಉಡುಗೆಯಾಗಿ ಬೆಳೆದು ಬಂದವು.

ಕರ್ನಾಟಕದ ರವಕೆಗೆ ಉಜ್ವಲ ಇತಿಹಾಸವಿದೆ. ಚಾಲುಕ್ಯ-ವಿಕ್ರಮಾದಿತ್ಯನ ಸಮಕಾಲೀನನಾಗಿದ್ದ ಕಾಶ್ಮೀರದ ಹರ್ಷನೆಂಬ ದೊರೆ, ಕನ್ನಡಿಗರ ವೇಷಭೂಷಣಗಳಿಗೆ ಮನಸೋತು, ಕ್ರಿ. ಶ. 11ನೇ ಶತಮಾನದಲ್ಲಿ ಅವನ್ನು ತನ್ನ ನಾಡಿನಲ್ಲಿ ಪ್ರಚಾರಕ್ಕೆ ತಂದನೆಂದು ಕಲ್ಹಣನ ಪ್ರಸಿದ್ಧ ಸಂಸ್ಕೃತ ಐತಿಹಾಸಿಕ ಕಾವ್ಯವಾದ ರಾಜತರಂಗಿಣಿ ಹೇಳುತ್ತದೆ. ಇವುಗಳಲ್ಲಿ ಹೆಂಗಳೆಯರ ಅರೆತೋಳಿನ ಕುಪ್ಪಸವಾದ 'ಕಂಚುಳಿಕೆ'ಯೂ ಒಂದಾಗಿತ್ತು! ಕಾಶ್ಮೀರಿ ಫೆರಾನ್ ಎಂಬ ನಿಲುವಂಗಿಯನ್ನು ಹೋಲುವ ನೈಟಿಯನ್ನು ಇಂದಿನ ಕನ್ನಡಿತಿ ತನ್ನದಾಗಿಸಿಕೊಂಡರೆ

ಹಿಂದಿನ ಕಾಶ್ಮೀರಿತಿ, ಕರ್ನಾಟಕದ ಸೀರೆ ಹಾಗೂ ಕುಪ್ಪಸವನ್ನು ಓಲಗದ ಡೌಲಿನ ಡ್ರೆಸ್ ಆಗಿ ಸ್ವೀಕರಿಸಿದ್ದು ಸ್ವಾರಸ್ಯಕರವಾಗಿದೆಯಲ್ಲವೇ?

ಕುಪ್ಪಸದ ಹೆಸರುಗಳೂ ಪ್ರಕಾರಗಳಂತೆಯೇ ವೈವಿಧ್ಯಪೂರ್ಣವಾಗಿವೆ. ಕುಬಸ, ರವಕೆ, ಕಂಚುಕೆ, ಕಂಚುಳಿಕೆ, ಕುಪ್ಪುಸ (ಕೂರ್ಪಸಕ-ಸಂಸ್ಕೃತಶಬ್ದದ-ತದ್ಭವ) ಜಂಪರ್, ಜಾಕೀಟು, ಪೋಲಕಾ, ಚೋಲಿ, ಆದಿ. ಇವುಗಳಲ್ಲಿ ಮುಂಗೈ ಮಟ್ಟದವು, ಮೊಣಕೈ ಮಟ್ಟದವು, ಅರೆತೋಳಿನವು, ತೋಳಿಲ್ಲದವು, ಬೆನ್ನಿಲ್ಲದವು, ಪಟ್ಟಿಯ ಬೆನ್‌ಬಲದವು 'ಹಿಂದೆರೆ' (back button) ಇತ್ಯಾದಿ ಇವೆ. ಬೆನ್ನಿಗೆ ಕಣ್ಣು ಇಲ್ಲದಿದ್ದರೂ ಇತರರ ಕಣ್ಣು, ತನ್ನ ತೆರೆದ ಬೆನ್ನು ನೋಡುತ್ತವೆ! ಎಂಬ ಹಿನ್ನೋಟ, ಹಿಂದಿನ ರಸಿಕರಮಣಿಯರಿಗೆ ಇತ್ತು! ಹೀಗಾಗಿ ಕೇವಲ ಕಿರಿಪಟ್ಟಿಯೊಂದೇ ಬೆನ್ನು ಮುಚ್ಚಲು ಸಾಕು ಎಂದು ಬೆನ್ನಿನ ಹಿಂಭಾಗ ತೆರೆದಿಟ್ಟರೂ, ಅತಿ ಮುಖ್ಯವಾದ ಮುಂಭಾಗವನ್ನು ಸರಿಯಾಗಿ, ಕಲಾತ್ಮಕವಾಗಿ ಮುಚ್ಚುವ ಮುಂಧೋರಣೆಯನ್ನು ಅವರು ತಳೆದಿದ್ದರು. 'ಬೆನ್‌ತೆರೆ' ಬ್ಲೌಸ್‌ಗಳು ಲಂಬಾಣಿ ಮತ್ತಿತರ ನಾಡನಿವಾಸಿಗಳಲ್ಲಿ ಶತಮಾನಗಳಿಂದ ಪ್ರಚಾರದಲ್ಲಿವೆ. ಕುಚಗಳು ಕಾಮಾಂಗವೆಂದು ಪರಿಗಣಿಸದ ಆದಿವಾಸಿಗಳಲ್ಲಿ, ಮಕ್ಕಳಿಗೆ ಹಾಲೂಡಿಸಲು, ಸುಲಭವಾಗುವ ಉಡಿಗೆಯಿದೆ.

ಮೂಲತಃ ಹಿಂದಿನ ಮಹಿಳೆಯರಿಗೆ ರವಕೆಯ ಅಂದಚೆಂದದ ಜೊತೆಗೆ ಬಟ್ಟೆಯ ಉಳಿತಾಯವೂ ಮುಖ್ಯವಾಗಿತ್ತು. ಕೈಯಿಂದಲೇ ನೂತು ನೇಯ್ದು, ಎಷ್ಟೋ ಬಾರಿ ಮನೆಯ ಮಗ್ಗಗಳಲ್ಲೇ ಬಟ್ಟೆ ತಯಾರಾಗುತ್ತಿದ್ದ ದಿನಗಳಲ್ಲಿ, ಬಟ್ಟೆಯನ್ನು ಹಿತಮಿತವಾಗಿ ಬಳಸಬೇಕಾಗುತ್ತಿತ್ತು. ಆದರೆ ಅತ್ಯಲ್ಪ ಬಟ್ಟೆಯಲ್ಲಿ ಅಂದವಾದ ಮೈಮಾಟ ಕಾಣುವಂತೆ, ಆದರೂ ವಕ್ಷಸ್ಥಳವನ್ನು ಸರಿಯಾಗಿ ಮುಚ್ಚುವಂತೆ 'ಚೋಳಿ' ಅಥವಾ 'ಕುಬಸಾ' ರೂಪಿಸಿಕೊಂಡ ವಿಶಿಷ್ಟ ಕಲೆಯ ಆವಿಷ್ಕಾರಕ್ಕೆ ಉತ್ತರ ಕರ್ನಾಟಕದ ಕನ್ಯಾಮಣಿಗಳು ಭಾಜನರು! 2 ಗೇಣಗಲ ಕಣದಲ್ಲಿ ಒಂದಿಂಚೂ ಹಾಳಾಗದಂತೆ, ಈಳಿಗೆ ಮಣೆ ಅಥವಾ ಕೈಗತ್ತಿಯಲ್ಲಿ ಬಟ್ಟೆ ಕತ್ತರಿಸಿ, ಕಣ್ಣಲ್ಲಿ ಕಣ್ಣಿಟ್ಟು, ಕೈಹೊಲಿಗೆ ಹಾಕಿ ವರ್ಷಗಟ್ಲೆ ಧರಿಸಿ, ಮನೆಯ, ಹೊಲದ ಕೆಲಸ ನಿಭಾಯಿಸುತ್ತಿದ್ದ ಅವರ ಹಸ್ತಕೌಶಲ ಎಂಥದಿರಬೇಕು? ದೇಹ ಪ್ರದರ್ಶನ ಮುಖ್ಯವಾಗಿರುವ ಇಂದಿನ ಯುಗದಲ್ಲಿ ಗಜಗಟ್ಟಲೆ ಬಟ್ಟೆ ಹಾಳುಗೆಡವಿದರೂ ಬೆನ್‌ತೆರೆ, ಎದೆಯ ಅರೆ-ತೆರೆ ರವಕೆಗಳು ಹೆಚ್ಚೆಚ್ಚು ಜನಪ್ರಿಯವಾಗುತ್ತಿವೆ. ವ್ಯತ್ಯಾಸವಿಷ್ಟೆ. ಎಲ್ಲವನ್ನೂ ಮರೆಮಾಡುವ ಸೀರೆಯ ಸೆರಗು, ಇಂದು ಮಾಯವಾಗಿದೆ.

ರವಕೆಯ ದಶಾವತಾರ, ಕಾಶ್ಮೀರದ ದೊರೆಗಷ್ಟೇ ಅಲ್ಲ, ಸಂಸ್ಕೃತ ಕವಿಗಳಿಗೂ ಪ್ರಿಯ ವಾಗಿತ್ತು. ಕವಿತೆಯ ಇಂಗಿತ ಹೇಗಿರಬೇಕು? ಎಂದು ಸೂಚಿಸುವ ಸುಭಾಷಿತವೊಂದು ಹೀಗಿದೆ:

'ಅರ್ಥೋಗಿರಾಮಪಿಹಿತಃ ವಿಹಿತಶ್ಚ ಕಶ್ಚಿತ್,
ಸೌಭಾಗ್ಯಮೇತಿ ಮರಹಟ್ಟ ವಧೂಕುಚಾಭಃ
ನಾಂಧ್ರೀ ಪಯೋಧರ ಇವಾತಿತರಂ ಪ್ರಕಾಶೋ
ನೋ ಗುರ್ಜರೀ ಸ್ತನ ಇವ ಅತಿತರಾಂ ನಿಗೂಢ!'

ಮುಚ್ಚಿದಂತಿರಬೇಕು, ಬಿಚ್ಚಿದಂತಿರಬೇಕು
ಮಹಾರಾಷ್ಟ್ರೀ ಹೆಣ್ಣಿನೆದೆಯಂತೆ ಕವಿತಾರ್ಥ!
ಆಂಧ್ರಿಯಂತೆಲ್ಲ ತೆರೆದಿಟ್ಟರೂ ಚೆನ್ನಲ್ಲ
ಗುರ್ಜರಿಯ ತೆರ ಪೂರ ಮರೆಸಿದರೂ ಸಲ್ಲ!

(ಕನ್ನಡ ಅನುವಾದ- ಪಾ.ವೆಂ. ಆಚಾರ್ಯರ 'ಸುಭಾಷಿತ ಚಮತ್ಕಾರ')

ಮಹಾರಾಷ್ಟ್ರದ ಮತ್ತು ಉತ್ತರಕರ್ನಾಟಕದ ರವಕೆಯ ಪ್ರಕಾರ ಒಂದೇ ಆಗಿತ್ತು, ಎಂದು ನೆನಪಿಸಿಕೊಳ್ಳಬಹುದು. ರಾಜತರಂಗಿಣಿಯಲ್ಲಿ ಕರ್ನಾಟಕದ ಚೋಲಿ ಅಥವಾ ಕಂಚುಳಿಕೆಯ ಉಲ್ಲೇಖ ಇರುವದರಿಂದ ಹಿಂದಿನ ಫ್ಯಾಶನೆಬಲ್ ಯುವತಿಯರು,- ಮಹಾರಾಷ್ಟ್ರವೂ ಸೇರಿದಂತೆ, ಕನ್ನಡಿತಿಯ ಕುಬಸವನ್ನು ಅನುಕರಿಸುತ್ತಿದ್ದರು, ಎಂದು ಊಹಿಸುವುದು ತಪ್ಪಾಗಲಾರದು! ಈಗ ಬಾಲಿವುಡ್‌ನ ಪ್ರಭಾವದಿಂದಾಗಿ ಬೆನ್‌ತೆರೆ ಕುಬಸದ ನವೀಕರಣ ಜನಪ್ರಿಯವಾಗಿದೆ.

ಫೋನ್ ಪತ್ರಕರ್ತೆಯ ಕೊನೆಯ ಪ್ರಶ್ನೆ ನನ್ನ ಇತಿಹಾಸ ಪ್ರಜ್ಞೆಯನ್ನು ಜಾಗರಿಸಿತು. "ಹೆಚ್ಚಿನ ಹಿರಿಯ, ವಯಸ್ಕ, ಮಹಿಳೆಯರು ಈಗಿನ ಕುಬಸದ ಫಿಟ್ಟಿಂಗ್ ಬಗ್ಗೆ ಅಸಂತೋಷ ವ್ಯಕ್ತಪಡಿಸುತ್ತಾರೆ. ನಿಮ್ಮ ಪ್ರತಿಕ್ರಿಯೆ ಏನು?" ಆಕೆ, ದರ್ಜಿಗಳ ಕೈಚಳಕದ ಅಭಾವದ ಕುರಿತು ಕೇಳುತ್ತಿದ್ದಾಳೆ, ಎಂದು ವಿವರ ಕೇಳಿದಾಗ ತಿಳಿಯಿತು. ಈ ನಾಡಿನ ಕುಶಲ ಸಿಂಪಿಗರ (ಚಿಪ್ಪಿಗರ) ಕತ್ತರಿ ಪ್ರಯೋಗದ ಕುರಿತ ಸಂದೇಹ ನನಗೆ ಇಷ್ಟವಾಗಲಿಲ್ಲ! ಕೂಡಲೇ ನೆನಪಾದದ್ದು, ಹೊಯ್ಸಳ ಮನೆತನದ ಕಾಲದ ಶಾಸನವೊಂದು ಚಿಪ್ಪಿಗರನ್ನು ಹೊಗಳಿದ್ದು. ಅವರು 'ವಸ್ತ್ರಖಂಡಿತ ಶೃಂಗಾರ ಚಿತ್ರೋದ್ಭವರ್' ಆಗಿದ್ದರಂತೆ! ಅಂದರೆ ಬಗೆ ಬಗೆಯ ಬಟ್ಟೆಗಳನ್ನು ಕತ್ತರಿಸಿ (ಹೊಲಿದು) ಉಳಿದ ಬಟ್ಟೆಯ ಚೂರುಗಳಿಂದಲೇ ಚಿತ್ರಗಳಿಂದ ಸಿಂಗರಿಸಿದ ಕಂಚುಳಿಕೆಗಳನ್ನು ಹೊಲಿಯಬಲ್ಲವರಾಗಿದ್ದರಂತೆ!

ಮತ್ತೊಂದು ಸುಭಾಷಿತದ ಇಂಗ್ಲಿಷ್ ಅನುವಾದವನ್ನು ಫೋನ್-ಪತ್ರಕರ್ತೆಗೆ ದೌಡಾಯಿಸಿದೆ. "ಚಪ್ಪಟೆ ಎದೆಯ ಹೆಣ್ಣು, ಕುಪ್ಪಸ ಹೊಲಿದುಕೊಟ್ಟ ಚಿಪ್ಪಿಗನ ಬೈದಳಂತೆ!" ಎಂದೆ. ಆಚೆ ಕೊನೆಯಿಂದ ಗಹಗಹಿಸಿದ ಸದ್ದುಕೇಳಿಸಿತು. "ನನ್ನ ಅಭಿಪ್ರಾಯ ಕೇಳುತ್ತಿಯಾ? ನಾನು ಮೂರು ಮೂರು ತಿಂಗಳಿಗೆ ಬ್ಲೌಸ್ ಪ್ಯಾಟರ್ನ್ ಬದಲಾಯಿಸುತ್ತೇನೆ. ಫ್ಯಾಶನ್ನಿಗಲ್ಲ. ಏರುತ್ತಲೇ ಹೋದ ಸ್ಥೂಲತೆಯಿಂದ! ಪುಣ್ಯಕ್ಕೆ ಮನೆಗೇ ಬಂದು ಅಳತೆ ನೋಡಿ ರವಕೆ ಹೊಲಿದು ಕೊಡುವ ತರುಣಿ ನನಗೆ ಸಿಕ್ಕಿದ್ದಾಳೆ" ಎಂದೆ. ಇನ್ನಷ್ಟು ನಕ್ಕು ವಂದಿಸಿ ಫೋನು ಕೆಳಗಿಟ್ಟಳು.

ಸೀರೆಯೊಂದಿಗೆ ರವಕೆಯ ಅವಸಾನ ಸನ್ನಿಹಿತವಾಗಿದೆ! ಎಂದು ನಂಬಿದ ನನಗೆ ಈಚೆಗೆ ಹೊಸ ಭರವಸೆ ಮೂಡಿತು. ಫ್ಯಾಶನ್ ಪರೇಡ್‌ಗೆ ಹೆಸರಾದ ಎಮ್. ಜಿ. ರಸ್ತೆಯಲ್ಲಿ ಬಿಗಿಯಾಗಿ ಪ್ಯಾಂಟ್ ತೊಟ್ಟು ಸೀರೆಯುಡುವೋಪಾದಿಯಲ್ಲಿ ಸೊಂಟದ ಭಾಗ ತೆರೆದಿಟ್ಟು, ತೀರ ಕಿರಿಯ ರವಕೆ (ಚೋಲಿ) ಧರಿಸಿದ ಕೆಲ ರಮಣಿಯರು ಗೋಚರಿಸಿದರು. ಅರ್ಥಾತ್, ಪಾಶ್ಚಾತ್ಯ + ಭಾರತೀಯ ಉಡುಗೆಯ ಸಮನ್ವಯದ ಯತ್ನ ಸಫಲವಾಗಿದೆ. ಸಲೀಸಾಗಿ ಸೀರೆಯನ್ನು ತೊರೆದರೂ ಕಿರಿ ರವಕೆಯನ್ನು ನಮ್ಮ ಕನ್ಯಾಮಣಿಗಳು ಬಿಗಿದಪ್ಪಿ ಧರಿಸಿದ್ದು, ಅದರ ಉಜ್ವಲ ಭವಿಷ್ಯವನ್ನು ಸಾರುವಂತೆ ಇತ್ತು.

ರೂಪ ಬದಲಾದರೂ ರವಕೆಗೆ ಸಾವಿಲ್ಲ! ■

# ನೋ ಟೀ ಅಟ್ ಆಲ್ಟಿನೋ!

ನಾನೊಮ್ಮೆ ಪ್ರಸಿದ್ಧ ಪ್ರವಾಸಿ ತಾಣವಾದ ಗೋವಾಕ್ಕೆ ಹೋಗುವ ಪ್ರಸಂಗ ಬಂದಿತು. ನನ್ನ ಪೂರ್ವಜರೆಲ್ಲ ಗೋವಾದಿಂದ ಕರ್ನಾಟಕಕ್ಕೆ ವಲಸೆ ಬಂದವರು. ಹೀಗಾಗಿ ನನ್ನ ಮನೆಮಾತು ಗೋವಾ ಜನರಂತೆ ಕೊಂಕಣಿ. ಒಮ್ಮೆ ಕೊಂಕಣಿ ಜಾನಪದ ಶಿಶುಸಾಹಿತ್ಯದ ಕುರಿತು, ಕೇಂದ್ರ ಸಾಹಿತ್ಯ ಅಕಾಡಮಿಯು ಗೋವಾ ರಾಜಧಾನಿ ಪಣಜಿಯಲ್ಲಿ ಎರಡು ದಿನಗಳ ಗೋಷ್ಠಿಯನ್ನು ಏರ್ಪಡಿಸಿತ್ತು. ನಾನು ಕೊಂಕಣಿ ಸಾಂಪ್ರದಾಯಿಕ ಮತ್ತು ಜಾನಪದ ಗೀತಗಳ ಕುರಿತ ಅಧ್ಯಯನ ಮಾಡಿರುವೆನಾದ್ದರಿಂದ ನನಗೂ ಗೋಷ್ಠಿಯಲ್ಲಿ ಪಾಲ್ಗೊಳ್ಳಲು ಆಮಂತ್ರಣ ಬಂದಿತ್ತು. ಆಮಂತ್ರಿತರಲ್ಲಿ 'ಅಮರಚಿತ್ರಕಥಾ' ಮಾಲಿಕೆ ಪ್ರಾರಂಭಿಸಿ, ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ರಾಮಾಯಣ-ಮಹಾಭಾರತಗಳಿಂದ ಆರಂಭಿಸಿ ಯಾವತ್ತೂ ವೀರಾಗ್ರೇಸರರ ಕತೆಗಳನ್ನೆಲ್ಲ ಮಕ್ಕಳಿಗೆ ತಲುಪುವಂತೆ ಮಾಡಿದ (ದಿ.) ಅನಂತ ಪೈ ಅಥವಾ ಅಂಕಲ್ ಪೈ ಇದ್ದರು. ಮುಖ್ಯ ಅತಿಥಿಗಳಾಗಿದ್ದ ಅವರೇ ಬಲುದೊಡ್ಡ ಆಕರ್ಷಣೆ ಆಗಿದ್ದರಿಂದ ಗೋವಾಕ್ಕೆ ಹೊರಟುನಿಂತೆ.

ಗೋವಾದಲ್ಲಿ ಪಣಜಿ ಬಳಿ ಗುಡ್ಡದ ಮೇಲೆ ಇರುವ ಆಲ್ಟಿನೋದ ಸರ್ಕೀಟ್ ಹೌಸ್‌ನಲ್ಲಿ ನನ್ನ ವಾಸದ ಏರ್ಪಾಡು ಮಾಡಿದ್ದರು. ಅಲ್ಲಿಯ ಶಾಂತ ವಾತಾವರಣ ತುಂಬ ಹಿತವೆನಿಸಿತು. ಸ್ವಚ್ಛ ಹವೆ, ಸ್ವಚ್ಛ ರಸ್ತೆಗಳು ಗ್ರಾಮೀಣಾವರಣ, ಹಸಿರು ಎಲೆಗಳ ಬಗೆಬಗೆಯ ತೋರಣಗಳನ್ನು ಹೊತ್ತು ನಿಂತ ಗಿಡಮರಗಳು, ತಲೆತುಂಬ ಹೂ ಮುಡಿದು, ನಗುನಗುತ್ತ ಗುಂಪು ಗುಂಪಾಗಿ ಹೋಗುತ್ತಿರುವ ಕೊಂಕಣಿ ಮಹಿಳೆಯರನ್ನೆಲ್ಲ ಕಣ್ಣುಗಳಲ್ಲಿ ತುಂಬಿಸಿಕೊಂಡೆ. ನಮ್ಮ ಜಿಲ್ಲೆಯ ಮನೆಗಳಂತೆಯೇ ಪುಟ್ಟ ಮನೆಗಳು ಇದುರು ಹೂದೋಟ, ಅಲಂಕೃತ ತುಳಸಿಕಟ್ಟೆಗಳು. ಒಂದರ ವಾಸ್ತು ಇನ್ನೊಂದರಂತೆ ಇಲ್ಲ. ಧಾಬೋಳದ ವಿಮಾನ ನಿಲ್ದಾಣದಿಂದ ಸರ್ಕೀಟ್ ಹೌಸ್‌ವರೆಗೆ ಟ್ಯಾಕ್ಸಿ ಓಡಿದಾಗ ಕಂಡ ನೋಟಗಳು ಇವಾಗಿದ್ದವು. ಬೆಂಗಳೂರು ಗೋವಾ ರೇಲ್ವೆಯ ಮೊದಲ ದರ್ಜೆ ತಿಕೀಟಗಿಂತ ನಿಲ್ದಾಣದಿಂದ ಸರ್ಕೀಟ್ ಹೌಸ್‌ಗೆ ಹೋದ ಟ್ಯಾಕ್ಸಿವೆಚ್ಚ ದುಬಾರಿಯಾಗಿತ್ತು.

ರಾತ್ರಿಯ ನೀರವತೆ, ಜೊತೆಗೆ ಯಾರೂ ಇರದೇ ಬೇಗನೇ ಮಲಗಿಬಿಟ್ಟೆ. ನನಗೆ ಬೆಳಿಗ್ಗೆ ತುಂಬ ಬೇಗ ಏಳುವ ಚಟ! ನಾಲ್ಕು ಗಂಟೆಗೂ ಮೊದಲೇ ಏಳುವದುಂಟು! ಎದ್ದೊಡನೆ ಪೂರ್ತಿ ಕಣ್ತೆರೆಯುವ ಮೊದಲೇ ಕಿಚನ್‌ಗೆ ಹೋಗಿ ಸ್ಟವ್ ಹತ್ತಿಸಿ ಕಾಫಿ ಅಥವಾ ಟೀಗಿಟ್ಟು ಆ ಬಳಿಕ ಮುಖಮಾರ್ಜನ. ಪ್ರಾತರ್ವಿಧಿಗಳು ರೂಢಿಯಾಗಿವೆ. ಅಂದೂ ಎಚ್ಚರವಾಗಿ ವಾಚ್ ನೋಡುತ್ತೇನೆ. ನಿಂತೇ ಹೋಗಿದೆ! ಬಹುಶಃ ಎಂದಿನಂತೆ ನಾಲ್ಕು ಗಂಟೆಯಾಗಿರಬೇಕು ಎಂದು ಮತ್ತೆ ಮಲಗಿದೆ. ಈ ಹೊತ್ತಿನಲ್ಲಿ ಟೀ-ಕಾಫಿ ಒದಗಿಸುವವರು ಯಾರು? ನಿದ್ರೆಬಾರದೇ ಎದ್ದು ನೀರುಕುಡಿದು, ಪ್ರಾತರ್ವಿಧಿ, ಮುಖಮಾರ್ಜನ ಮುಗಿಸಿ ಅಂದು ಪ್ರಸ್ತುತ ಪಡಿಸಬೇಕಾಗಿದ್ದ ಪ್ರಬಂಧವನ್ನು ಇನ್ನೊಮ್ಮೆ ಓದಿ ತಿದ್ದಿದೆ. ಕೆಲ ಯೋಗಾಸನಗಳನ್ನು ಮಾಡಿದೆ. ಚಡಪಡಿಸುತ್ತ ಬಟ್ಟೆ ಬದಲಿಸಿ ಶೂ

ತೊಟ್ಟು, ಮೆಟ್ಟಿಲಿಳಿದು ಬಂದೆ. ಗೆಸ್ಟ್ ಹೌಸ್‌ನ ಪ್ರತೀಕ್ಷಾಲಯದ ಗಡಿಯಾರ ಆರುಗಂಟೆ ತೋರಿಸಿತು.

ಆದರೆ ಗೆಸ್ಟ್ ಹೌಸ್‌ನಲ್ಲಿ ಅಗಾಧ ಶಾಂತಿ. ಸುತ್ತಲೆಲ್ಲ ಕಗ್ಗತ್ತಲೆ. ಘೋರ ಮೌನ. ಗೇಟ್ ಬಳಿಯ ಗಾರ್ಡ್ ಕೂಡ ತೂಕಡಿಸುವ ಬದಲು ಗೊರಕಿಸುತ್ತ ಇದ್ದ. ಗೇಟ್ ತೆಗೆದು ಹೊರಗೆ ಬಂದೆ. ಮನುಷ್ಯರದಾಗಲಿ, ಪಶು-ಪ್ರಾಣಿಗಳದಾಗಲಿ ಸುಳಿವೇ ಇಲ್ಲ. ಅತಿದೂರದಲ್ಲಿ ಮಾತ್ರ ಕೆಲ ಹಕ್ಕಿಗಳು ಚಿಲಿಪಿಲಿ ನಡೆಸಿದ್ದವು. ಪಕ್ಕದಲ್ಲಿ ಭೂಸೈನ್ಯದ ಆಫೀಸಿನ ಸ್ಕ್ವಾಡ್‌ನ್ ಗೇಟು ಕಂಡಿತು. ಕಪ್ಪಾಗಿದ್ದರೂ ಎತ್ತರವಾಗಿ ಲಕ್ಷಣವಾಗಿದ್ದ ತರುಣನೊಬ್ಬ ಗೇಟ್ ಕಾಯುತ್ತಿದ್ದ.

"ಇಲ್ಲಿ ಎಲ್ಲಾದರೂ ಚಾಯ್ ದೊರೆಯಬಹುದೇ?" ಹಿಂದಿಯಲ್ಲಿ ವಿಚಾರಿಸಿದೆ.

"ಹಾಯ್ ರಾಮ್! ಮೇಮ್ ಸಾಬ್, ಈ ಹೊತ್ತಿನಲ್ಲಿ ಚಾಯ್ ಬಗ್ಗೆ ವಿಚಾರಿಸುತ್ತೀರಾ? ಗೋವಾದವರಿಗೆ ಇನ್ನೂ ಮಧ್ಯರಾತ್ರಿ! ಅವರಿಗೆ ಬೆಳಗಾಗಲು ಇನ್ನೆರಡು ಗಂಟೆ. ಚಾ ತಯಾರ ಮಾಡಿ ನಿಮಗೆ ಸಿಗಲು ಆ ಬಳಿಕ ಇನ್ನೊಂದು ಗಂಟೆ!" ಸೂರ್ಯವಂಶಿಗಳ ದಿನಚರಿಯನ್ನು ಗಾರ್ಡ್ ಬಿತ್ತರಿಸಿದ.

ಗೋವಾದವರ ತಡರಾತ್ರೆಯ ಊಟ-ಪಾರ್ಟಿಗಳು, ಮಧ್ಯಾಹ್ನದ ನಿದ್ರೆಗಳ ಬಗ್ಗೆ ಗೊತ್ತಿದ್ದರೂ, ಅವರ ಸೂರ್ಯೋದಯ ದರ್ಶನ ಬೆಳಗಿನ ಎಂಟೂವರೆ ಗಂಟೆಗೆಂದು ಅಲ್ಲಿಂದ ಕೇವಲ ಮೂರು ಗಂಟೆ ವಾಹನ ಪ್ರವಾಸದಷ್ಟು ದೂರದ ಹೊನ್ನಾವರದಲ್ಲಿ ವಾಸಮಾಡುತ್ತಿರುವ ಈ ಹಿರಿವಯಸ್ಕಳಿಗೆ ಗೊತ್ತಿರಲಿಲ್ಲ.! "ಹೊನ್ನಾವರದ ಶರಾವತಿಯಾಚೆ, ಸೂರ್ಯಭಗವಾನನು ಭೇಟಿ ನೀಡುವುದು ಆರುಗಂಟೆಗೂ ಮೊದಲು!" ನನಗರಿಯದೇ ಉದ್ಗಾರವೊಂದು ನನ್ನ ಬಾಯಿಂದ ಹೊರಬಿತ್ತು.

ನನ್ನ ನಿರಾಸೆ, ನಿಟ್ಟುಸಿರುಗಳನ್ನು ಗಮನಿಸಿದ ಆತ ಸಂತೈಸುವ ಧ್ವನಿಯಲ್ಲಿ ಹೇಳಿದ. "ಇಲ್ಲಿ ಯಾವ ಕ್ಯಾಂಟೀನೂ ಇಲ್ಲ.! ನಿಜ! ಆದರೆ ಇದೇ ರಸ್ತೆಯಲ್ಲಿ ನೇರ ನಡೆದು ಹೋಗಿ. ಅರ್ಧಗಂಟೆ ನಡೆದರೆ ಚೌರಾಹಿ (ನಾಲ್ಕು ರಸ್ತೆಯ ಕೂಟ) ಸಿಗುತ್ತದೆ. ಅದರ ಎಡಕ್ಕೆ ಚಿಕ್ಕ ಗೂಡಂಗಡಿ ಇದ್ದ ನೆನಪು! ನಿಮ್ಮ ನಸೀಬ್ ಚೆನ್ನಾಗಿದ್ದರೆ, ನೀವಲ್ಲಿ ತಲುಪುವಷ್ಟರಲ್ಲಿ ಅದು ಪ್ರಾರಂಭವಾದರೂ ಆಗಬಹುದು!" ಆತನ ಮುಗುಳ್ನಗೆಯಲ್ಲಿ ಪರಿಹಾಸವೂ ಇರಲು ಸಾಕು. ನನ್ನ ಇರುವೆ-ಅಲ್ಲಲ್ಲ! ಗಜಗಾತ್ರದ ದೇಹದ ಇರುವೆ ನಡಿಗೆಯ ಕುರಿತು.

ನಾನು ವಾಕ್ ಪ್ರಾರಂಭಿಸಿದೆ. ಈಗೆರಡು ದಶಕಗಳಿಂದ ನಸುಕಿನ ತಿರುಗಾಟ ರೂಢಿಯಾಗಿದೆ. ಗೋವಾ-ಆಲ್ಟಿನೋದ ಈ ರಸ್ತೆಯಂತೂ ಇಬ್ಬದಿಯ ಗಿಡಗಳಿಂದ ಹೂ ಚೆಲ್ಲಿದ ಹಾದಿ. ಕಾಜೂ (ಗೋಡಂಬಿ)ಹೂವಿನ ಅಪರೂಪದ ಘಮದೊಂದಿಗೆ 'ಜಾಯಿ-ಜೂಯಿ'(ಮಲ್ಲಿಗೆ-ಸೂಜಿಮಲ್ಲಿಗೆ)ಯ ಕಂಪು ಸೇರಿಕೊಂಡಿದೆ. ಅದನ್ನೇ ಆಘ್ರಾಣಿಸುತ್ತ ನಡೆದೆ. ಸ್ವಚ್ಛವಾದ, ವಾಹನಗಳಿಲ್ಲದ ರಸ್ತೆಯಿಡೀ ನನ್ನದೇ! ಎಂಬ ಗತ್ತಿನಿಂದ ಅರ್ಧಗಂಟೆಗೂ ಮಿಕ್ಕಿ ನಡೆದೆ. ಪಣಜಿ ಪಟ್ಟಣ 'ಪ್ಲಾಸ್ಟಿಕ್ ಫ್ರೀ' ಪಟ್ಟಣವೆಂದು ಘೋಷಿಸಿ ಕೆಲಕಾಲ ಕಳೆದಿತ್ತು. ಕಸಕಡ್ಡಿ ಪ್ಲಾಸ್ಟಿಕ್ ತ್ಯಾಜ್ಯ ಇರಲಿಲ್ಲ.

ಈಗ ಜನಸಂಚಾರ ಕಂಡಿತು. ಗಾರ್ಡ್‌ನ ಚೌರಾಹಿ ಇದೇ ಇರಬೇಕು! ಅಂದುಕೊಂಡೆ. ಆದರೆ ಟೀ ಸ್ಟಾಲ್ ಕಾಣಿಸಲಿಲ್ಲ! ಬದಲಿಗೆ ಜಾಗಿಂಗ್ ಮಾಡುತ್ತಿದ್ದ ಎಲ್ಲ ವಯಸ್ಸಿನ ನರನಾರಿಯರು ಪಾಶ್ಚಾತ್ಯ ಉಡಿಗೆ-ಶೂಗಳಲ್ಲಿ ಕಂಡರು. ನಡೆಯುತ್ತ ಇದುರಿಗೆ

ಕಂಡ ದೊಡ್ಡ ಪಾರ್ಕ್ ಪ್ರವೇಶಿಸಿದೆ. ರಾಕ್ಷಸಾಕಾರದ ಬೋರ್ಡು ಕಾಣಿಸಿತು. ಅದರಲ್ಲಿ 12–15 ಹೆಸರುಗಳು. ಸಿ.ಎಮ್.(ಮುಖ್ಯಮಂತ್ರಿ)ನಿಂದ ಹಿಡಿದು ತೋಟಗಾರಿಕೆ ಮಂತ್ರಿ, ನಗರಪಾಲಿಕಾಮಂತ್ರಿ, ಅವೆರಡರ ಶಾಖೆಗಳ, ಇಬ್ಬರು ಕಾರ್ಯದರ್ಶಿ ಮತ್ತು ಸಚಿವರು, ಜಾಗ ನೀಡಿದ ಮಹಾನುಭಾವರು, ಅವರ ಪತ್ನಿ ಮತ್ತು ನಗರ ಪಾಲಿಕೆಯ ಸದಸ್ಯರ ಹೆಸರುಗಳೆಲ್ಲ ನಾಗರಿಕರಿಗೆ 'ಉಚಿತವಾಗಿ' ಕೊಡಮಾಡಿದ ಈ ದಾನವನ್ನು ಪ್ರಾತಃ ಸ್ಮರಣೀಯವಾಗುವಂತೆ, ಜಾಗಿಂಗ್ ತಂಡಕ್ಕೆ ಕಂಠಪಾಠವಾಗುವಂತೆ, ದೂರದಿಂದ



ಕಾಣುವಂತೆ, ಬರೆಸಿದ್ದರು. ಪರಿಸರ ರಕ್ಷಣೆಗೆ ಕಾರಣೀಭೂತರಾದಂಥ, ವೃಕ್ಷಾರೋಪಣೆಗೆ ಟೊಂಕಕಟ್ಟಿ, ಸ್ಥಾಪನಾ ದಿನದಂದು ನೀರೆರೆದು, ಪೋಷಿಸಿದ, ಪ್ರಚಾರ ಪಡೆದ ತ್ಯಾಗಶೀಲ ತಂಡಕ್ಕೆ ಇಷ್ಟಾದರೂ ಪ್ರಸಿದ್ಧಿ ಬೇಡವೇ? ಬೋರ್ಡನ್ನು ಪ್ರಾರಂಭದಿಂದ ಓದಿದೆ. ಯಥೇಚ್ಛವಾಗಿ ಲಭ್ಯವಿದ್ದ ಸ್ವಚ್ಛಗಾಳಿಯನ್ನು ಚಹದ ಬದಲಾಗಿ ಮನಃಪೂರ್ತಿ ಕುಡಿದೆ. ಮತ್ತೆ ಚಾದ ಶೋಧದಲ್ಲಿ ಮುನ್ನಡೆದೆ. ಇನ್ನೂ ಅರ್ಧಮೈಲಿ.

ದಾರಿಯಲ್ಲಿ ಒಂದು ಅರಳಿಮರ. ಕೆಳಗೆ ಕಟ್ಟೆಯ ಮೇಲೆ ನಾಲ್ಕಾರು ಜನ ಕುಳಿತು ಕೊಂಕಣಿ ಭಾಷೆಯಲ್ಲಿ ಸಲ್ಲಾಪ ನಡೆಸಿದ್ದರು. ಈ ಭಾಷೆ ಗೋವಾದ ಪ್ರಾದೇಶಿಕ ಭಾಷೆಯೂ ಹೌದು. ರಾಜ್ಯ ಭಾಷೆಯೂ ಹೌದು. ನನ್ನ ಮಾತೃಭಾಷೆಯೂ ಹೌದು.

"ಬಾಯ್! (ಬಾಯಿಯವರೇ!) ಇಲ್ಲೆಲ್ಲಾದರೂ ಚಾ ಸಿಗುತ್ತದೆಯೇ?" ಅವರಲ್ಲಿ ಹಿರಿಯಳನ್ನು ಕೊಂಕಣಿಯಲ್ಲಿ ವಿಚಾರಿಸಿದೆ.

"ಚಾ? ಬೇಕಾದಷ್ಟು ಸಿಗುತ್ತದೆ!" ಮೂವರು ಏಕಕಾಲಕ್ಕೆ ಉತ್ತರಿಸಿದರು.

"ಆದರೆ ಎಲ್ಲಿ?"

"ಓ ಅಲ್ಲಿ!" ಖಾಲಿ ಕಿಯೋಕ್ಸ (ಗೂಡಂಗಡಿ) ತೋರಿಸಿದರು.

"ಆದರೆ ಯಾವಾಗ?"

"ಒಂಬತ್ತು ಗಂಟೆಯ ಬಳಿಕ. ಮಾಪುಸಾದಿಂದ 'ಅಂಗಡಿ' ಮಾಲಿಕ ಬರಬೇಕಲ್ಲ?" ಇನ್ನೊಬ್ಬಾತ ನುಡಿದ.

"ಅರೇ ಬಾಬಾ!" ನನ್ನ ನಿರಾಸೆಯ ಉದ್ಗಾರ ಗಮನಿಸಿ ತರುಣನೊಬ್ಬ ನುಡಿದ. "ನೀನು ಬಂದ ರಸ್ತೆಯಿಂದ ತಿರುಗಿ ಹೋಗು! ರಸ್ತೆಯ ಕೊನೆ ತನಕ ಹೋಗಿ ಎಡಕ್ಕೆ ತಿರುಗು. ಮತ್ತೆ ಸುಮಾರು ನಡೆದರೆ ಅಲ್ಲಿ 'ಟೆಲಿಫೋನ್ ಎಕ್ಸ್‌ಚೇಂಜ್' ಆಫೀಸ್ ಸಿಗುತ್ತದೆ. ರಾತ್ರಿ ಪಾಳಿಯ ಕೆಲಸಗಾರರಿಗೆ ಅಲ್ಲಿ ಚಹಮಾಡಿ ಕೊಡುತ್ತಾರೆ. ಪ್ರಯತ್ನಿಸಿ ನೋಡು. ಸಿಕ್ಕರೂ ಸಿಗಬಹುದು"

"ಟೆಲಿಫೋನ್ ಎಕ್ಸ್‌ಚೇಂಜ್ ಆಫೀಸ್ ಎಲ್ಲಿ?" ನಾನು ಕೇಳಿದೆ. ಬರುವಾಗ ಕತ್ತಲೆಯಿತ್ತಲ್ಲ?

"ಅರೇ! ಬಾಯ್! ಸೀ ಎಮ್ಮರ ಬಂಗ್ಲೆಯ ಬಳಿಯೇ ಇದೆ!"

"ಸೀ ಎಮ್ಮರ ಬಂಗ್ಲೆ ಎಲ್ಲಿದೆ?"

ಈಗ ನನ್ನ ಪ್ರಶ್ನೆಗೆ ಎಲ್ಲರೂ ಗಹಗಹಿಸಿ ನಕ್ಕರು. ಗೋವಾ ಪುಟ್ಟರಾಜ್ಯ. ರಾಜಧಾನಿ ಪಣಜಿ ಇನ್ನೂ ಚಿಕ್ಕದು. ಸೀ ಎಮ್ಮರ ಮನೆ ಎಲ್ಲಿದೆ? ಎಂದು ಗೊತ್ತಿಲ್ಲದ ಕೊಂಕಣಿ ಪ್ರಾಣಿ, ಗೋವಾದಲ್ಲಿ ಇದ್ದಿರಬಹುದು! ಎಂಬುದು ಅವರ ಊಹೆಗೆ ನಿಲುಕದ ವಿಚಾರವಾಗಿತ್ತು. ಅದರಲ್ಲೂ ಅಂದಿನ ಮುಖ್ಯಮಂತ್ರಿ, ಸಾಮಾನ್ಯರೊಂದಿಗೆ ಬೆರೆಯುವ ಜನಪ್ರಿಯರಾಗಿದ್ದರು.

ನಾಲ್ಕನೆಯವ ಹೇಳಿದ. "ಅದೇ ರಸ್ತೆಯಲ್ಲಿ ಮೊದಲಿಗೆ ಸರಕಾರಿ ಸರ್ಕೀಟ್ ಹೌಸ್ ಒಂದು ಇದೆ. ಅಲ್ಲಿ ಒಂದು ಒಳ್ಳೆಯ ಕ್ಯಾಂಟೀನ್ ಇದೆ. ಅವರು ತುಂಬ ಬೇಗ ಎದ್ದಿರುತ್ತಾರೆ. ನೀನು ತಿರುಗಿ ನಡೆಯುತ್ತ ಹೋದರೆ ಖಂಡಿತ ಸಿಕ್ಕೀತು!"

ನಾನು ಬಂದ ದಾರಿಯಲ್ಲಿ ಹಿಂದಿರುಗಿ ನಡೆದೇ ನಡೆದೆ. ಹೊರಟ ಜಾಗದ ಅತಿಥಿಗೃಹಕ್ಕೆ ಹಿಂದಿರುಗಿ ಬಂದು ಮುಟ್ಟಿದೆ. ಏಳೂ ಐವತ್ತೈದು ಆಗಿತ್ತು. ಕ್ಯಾಂಟೀನ್ ಆರಂಭವಾಗಿತ್ತು. ಒಂದಲ್ಲದ ಹಾಗೆ ಎರಡು ಕಪ್ ಚಹಕ್ಕೆ ಆರ್ಡರ್ ಮಾಡಿ ಹೀರುತ್ತ ನನ್ನ ಚಹಾ ಶೋಧದ ಸಾಹಸವನ್ನು ಆಚರಿಸಿದೆ!. ■

# ಡ್ರೆಸ್ ಕೋಡ್!

ಓಡುವ, ಕೆಲಸ ಮಾಡುವ ಶಾಲೆ-ಕಾಲೇಜು, ಸಂಸ್ಥೆಗಳಲ್ಲೆಲ್ಲ ಉಡುಪು ಹೇಗಿರಬೇಕು? ಎಂಬುದು ಕೊನೆಗಾಣದ ಚರ್ಚೆ, ಆಕ್ರೋಶ, ಅವಾಂತರಗಳ ನಡುವೆ ದಿನ ಕಳೆಯುತ್ತಿರುವ ನನಗೆ ಅಮೆರಿಕೆಯ ಪ್ರವಾಸ ಕಣ್ಣು ತೆರೆಸಿತ್ತು. 'ಉದರನಿಮಿತ್ತಂ ಬಹುಕೃತವೇಷ'ವೆಂದು ಆಚಾರ್ಯರು ಹೇಳಿದ್ದು ಶತಮಾನಗಳ ಹಿಂದೆ. ಹೊಟ್ಟೆಪಾಡಿಗೆ ವೇಷಧಾರಿ ಆಗಬೇಕಿಲ್ಲ! ಹೊಟ್ಟೆಗೆ ಹಿಟ್ಟಿಲ್ಲವಾದ್ರೂ ಜುಟ್ಟಿಗೆ ಹೂ ಬೇಕು ಎನ್ನುವ ತತ್ವದಲ್ಲಿ ವಿಶ್ವಾಸ ಹುಟ್ಟುವಂತೆ ಆಧುನಿಕ ಭಾರತ ಬೆಳೀತಾ ಇದೆ! Ethnic designing cosmetic jewellery. Elite dressing ಮುಂತಾದವು ಗಂಭೀರ ಅಧ್ಯಯನದ ವಿಷಯಗಳಾಗಿದ್ದ ಕಾವೇರಿಯಿಂದ ಗೋದಾವರಿವರೆಗಿನ ನಾಡಿನಿಂದ ಹೋದವಳಿಗೆ, ಹದಿಹರೆಯದವರಿಂದ ಹಣ್ಣು ಹಿರಿಯರವರೆಗೆ ಒಂದೇ ಪ್ರಕಾರದ ಉಡುಗೆ ತೊಡುವ ಅಮೇರಿಕನ್ನರ ವಿಧಾನ ಒಪ್ಪಿಗೆ ಇಲ್ಲ. ಆದರೆ ಅದೇ ಜನ ಎಂಥಾ ಸುಂದರ ಉಡುಪು! ಎಂದು ಸೀರೆಯ ಕುರಿತು ಉದ್ಗರಿಸಿದಾಗಲೂ ಸಹಮತ ಇಲ್ಲ. ಏಕೆಂದರೆ, ಸೀರೆಯುಡುಗೆಯ ಅನಾನುಕೂಲತೆಗಳನ್ನೆಲ್ಲ ಅದನ್ನು ಉಟ್ಟಾಗಿಂದ ತೊಟ್ಟೂ ಅನುಭವಿಸಿ ಗೊತ್ತು ಅದ! ಅಂದವಾದ ಮೈಕಟ್ಟಿನ ಇನ್ನೊಬ್ರು ಉಟ್ರ ಮಾತ್ರ ಛಂದ ಕಾಣೋ ಉಡಿಗೆ ಅದು. Party dress, ಅಂತಾರಲ್ಲಾ ಅಂಥಾದ್ದು!, ಅಂತ ಭಾಳ ವರ್ಷ ನಂಬಿದ್ದೆ. ಆದ್ರೆ ಕ್ರಮೇಣ, ಸೀರೆಯ ಚರಿತ್ರ ಓದ್ತಾ ಹೋದಂಗ ಅದರ ಹಿರಿಮೆ ತಿಳಕೊಂಡ ಹಂಗ ಅದರ ಮ್ಯಾಲಿನ ಪ್ರೀತಿ ಬೆಳಕೋತಾ ಹೋತು! ಕೊನೆಗೆ ಸೀರೆಯೆಂಬ ಸರ್ವಾಂಗಯಾಮಿಯ ಶಾಶ್ವತ ವರ್ತುಳದಲ್ಲಿ ಸಿಕ್ಹಾಕಿಕೊಂಡು ಬಿಟ್ಟೆನ್ರಿ, ಈ ಅರವತ್ತು ವರ್ಷಗಳಿಂದ! ಬೆಳವಡಿ ಮಲ್ಲಮ್ಮ, ಕಿತ್ತೂರ ಚೆನ್ನಮ್ಮ, ಝೂಂಸಿಲಕ್ಷ್ಮಿಯರೆಲ್ಲ ಸೀರೆ ಉಟ್ಕೊಂಡೇ ಕುದುರೆ ಏರಿ ಯುದ್ಧ ಮಾಡಿದ್ರಲಾ! ಈಗ ಬರೇ ಕೈಗೆ-ಬಾಯ್ಗೆ ಜಗಳಾ ಹಚ್ಚುವಾಕಿಗೆ ಸೀರೆಗಿಂತ ವೀರೋಚಿತ ಡ್ರೆಸ್, ನನ್ನ ಧ್ಯಾನಕ್ಕ ಬರೋದಿಲ್ಲ ಬಿಡ್ರಿ!

ಕೆಲ ವರ್ಷಗಳ ಹಿಂದೆ ಇತಿಹಾಸ ಸಮ್ಮೇಳನ ಒಂದರಲ್ಲಿ 'ಗಂಡಸರಿಗೂ ಸೀರೆ!' ಅನ್ನೋ ಸಂಶೋಧನಾ ಪ್ರಬಂಧ ಓದಿದ್ದೆ. ಕರ್ನಾಟಕದಲ್ಲಿ ಈಗ ಹೆಂಗಸರೆಲ್ಲಾ ಗಂಡಸರನ್ನ ಅನುಸರಿಸಿ ಪ್ಯಾಂಟ್ ಶರ್ಟ್ ತೊಟ್ಟರೆ, ಹಿಂದೊಮ್ಮೆ ಗಂಡಸರೆಲ್ಲ ಸೀರೆಯ ಸೌಂದರ್ಯಕ್ಕೆ ಮನಸೋತು ಜರತಾರಿ ಅಂಚಿನ, ಬುಟ್ಟಾ ಹೂಗಳ ಮಿರುಮಿರುಗುವ ಸೀರೆಯುಟ್ಟು, ಸೊಂಟಕ್ಕೆ ಚಿತ್ತಾರದ ರೇಶ್ಮೆಯ ಬೆಲ್ಟ್ ಓರಣವಾಗಿ ಕಟ್ಟಿಕೊಂಡು ಕಂಗೊಳಿಸುತ್ತಿದ್ದರು. ಅಂಥ ಭಿತ್ತಿ ಚಿತ್ರಗಳು ಈಗಲೂ ಹಿಂದುಪುರ ಬಳಿಯ ಲೇಪಾಕ್ಷಿ ದೇವಾಲಯದಲ್ಲಿ ಜೀರ್ಣಾವಸ್ಥೆಯಲ್ಲಿದ್ರೂ, ಗಂಡಸರ ಸೀರೆ ಪ್ರೀತಿಯ ಸಾಕ್ಷಿ ಆಗಿ ಉಳಕೊಂಡಾವ! ನನ್ನ ಪ್ರಬಂಧ-ಗಂಡಸರಿಗೂ ಸೀರೆ! ಬಗೆಬಗೆಯ ಪ್ರತಿಕ್ರಿಯೆ ಗಳಿಸ್ತು ಏನ್ರಿ, ಆಮೇಲೆ "ಮ್ಯಾಡಂ ಕಾಮತರು ಗಂಡಸ್ರಿಗೆಲ್ಲ ಸೀರಿ ಉಡ್ಸಿಬಿಟ್ರು!" ಅಂತ ಸ್ನೇಹಿತರು ಗೇಲಿ ಮಾಡಲಿಕ್ಕೆ ಸುರುಮಾಡಿದ್ರು. ವರ್ಷಾವರ್ಷಾ ಇತಿಹಾಸ ಸಮ್ಮೇಳನದೊಳಗೆ ಬ್ಯಾರೇ

ಬ್ಯಾರೇ ವಿಷಯದ ಮ್ಯಾಲೆ ಪೇಪರ ಬರೀತೀನ್ರಿ, ಆದ್ರ 'ಗಂಡಸ್ರಿಗೆ ಸೀರೆ' ಉಡಿಸಿದ ಖ್ಯಾತಿ, ಪ್ರಚಾರ ನನಗ ಸಿಕ್ತು. ಇಂಥಾಕಿ, ಕಾಯಂ 'ಸ್ಯಾರೀ' ಅಭಿಮಾನಿ ಆಗಿ ಉಳದ್ರ, ಬೆಳದ್ರ ಏನ ಆಶ್ಚರ್ಯ ಹೇಳ್ರಿ?

ಇಂಥವಳಿಗೆ ಅಮೇರಿಕೆಗೆ ಮಗನ ಮನಿಗೆ ಹೋದಾಗ ಆಪತ್ತೊಂದು ಎದುರಾತ್ರಿ! ನನ್ನ ವಿದೇಶಿ ಸೊಸೆ ಕಿಮ್‌ಗೆ, ಸೀರೆಯೊಂದಿಗಿನ ನನ್ನ ಶಾಶ್ವತ ಸಂಗ, ಸರಿ ಬೀಳಲಿಲ್ಲ. Be a Roman in Rome. ನಿನ್ನ ಡ್ರೆಸ್ ಬದಲಿಸಲಿಕ್ಕೆ ಬೇಕು! ಅಂತ ಆಗ್ರಹ ಮಾಡಿದ್ಲು. ಓಡಾಟಕ್ಕೆ, ಜಾಗಿಂಗಿಗೆ, ಮಳೆ, ಗಾಳಿಯೊಳಗ ಸ್ವಚ್ಛಂದ ಮೈ ಒಡ್ಡಲಿಕ್ಕೆ ಅನುಕೂಲ ಅಂದ್ಲು. ಸಣ್ಣಾಕಿ ಇದ್ದಾಗನ, ನಮ್ಮ ತಂದಿ, ನಮಗೆಲ್ಲ ಈಜು ಕಲಿಸಿದ್ರು, ಆದರೆ ಇಷ್ಟೆಲ್ಲ ವರ್ಷದ ಆಕಾಶವಾಣಿ ವರ್ಗಾವರ್ಗಿಯೊಳಗ ಈಜಲಿಕ್ಕೆ ಎಲ್ಲೂ ಅವಕಾಶ ಸಿಕ್ಕಿರಲಿಲ್ಲ. ನೀರ ಕಂಡೊಡನೆ ಹಾರಬೇಕು ಅನ್ನೋ ಇಚ್ಛಾ ಅದುಮಿ ಅದುಮಿ ಹಿಡಿದಿದ್ದೆ. ಈಗ ಸೊಸಿ, ಒಂದು ಅವಕಾಶ ಮಾಡಿಕೊಟ್ಟು, ಅವರ ಮನೆ ಹಿಂದೆ ಇರೋ ಸ್ವಿಮಿಂಗ್ ಪೂಲ್‌ಗೆ ನನ್ನ ಹೆಸರು ಹಚ್ಚಿಸಿಬಿಟ್ಲು. ಎಲ್ಲಾ ವಯಸ್ಸಿನವರೂ ಈಜ್ತಾ ಇರೋ ಜಾಗಾದೊಳಗೆ ಸ್ವಿಮಿಂಗ್ ಟ್ರಂಕ್ಸ್ ತೊಡಲಿಕ್ಕೆ ನನಗೇನು ಸಂಕೋಚ ಆಗಲಿಲ್ಲ!

ಆದ್ರ ನನ್ನ ದಿನಚರಿ ಭಾಗವಾದ ನಸುಕಿನ ವಾಕ್‌ಗೆ, ಸೀರಿ ಉಟ್ಕೊಂಡೇ ಹೋಗ್ತಿದ್ದೆ. ನಮ್ಮ ಮನೆಯಿಂದ ಮೂರನೆಯ ಮನೆಯಲ್ಲಿ ಲೆಬ್ರೆ ಡೋರ್ ರಿಟ್ರೀವರ್ 'ಬಾರ್ಕಿ' ಎಂಬ ಭಾರೀ ನಾಯಿ ನನ್ನನ್ನು ದೂರದಲ್ಲಿ ಕಂಡೊಡನೆ ಓಡಿಬಂದು ರಸ್ತೆದಾಟಿ ಹೋಗುವವರೆಗೂ ಬೊಗಳುತ್ತಿತ್ತು. ಇತರರಾರಿಗೂ ಈ ಬೊವ್! ಬೊವ್! ಪರಾಕ್ ಲಭಿಸುತ್ತಿರಲಿಲ್ಲ! "ನೋಡಿದೆಯಾ? ನಿಮ್ಮ ದೇಶದ ನಾಯಿಗೂ ವಿದೇಶೀಯರನ್ನು ಕಂಡ್ರೆ ಆಗೋದಿಲ್ಲ. 29/11ರ ಪ್ರಭಾವ" ಎಂದು ನೊಂದುಕೊಂಡು ಕಿಮ್‌ಗೆ ಹೇಳಿದೆ. ಆಕೆ ನಕ್ಕು, ಅದಕ್ಕೇ ಹೇಳಿದ್ದು ಅದು ಬೊಗಳೋದು ನಿಮಗಲ್ಲ. ನಿಮ್ಮ ಸೀರೆಗೆ. ನಿಮ್ಮ ಸೀರೆ ಅದಕ್ಕೆ ವಿಚಿತ್ರವಾಗಿ ಕಂಡಿದೆ! ನಾಳೆಯಿಂದ ಟ್ರ್ಯಾಕ್ ಸೂಟ್ ಹಾಕಿ. ನಿಮಗೇ ಅಂತರ ಗೊತ್ತಾಗುತ್ತದೆ! ಎಂದು ತಾನಾಗಲೇ ಖರೀದಿಸಿ ತಂದ ತಿರುಗಾಟದ, ಅಲೆದಾಟದ, ಹಾರಾಟದ ಉಡುಗೆಗಳನ್ನು ನನ್ನ ಮೈಗೇರಿಸಿ, ನಿಲುವುಗನ್ನಡಿಯಿದುರು ನಿಲ್ಲಿಸಿ, ಸಂಭ್ರಮಪಟ್ಟಳು.

ಅವಳು ಹೇಳಿದ್ದು ನಿಜ. ಬಾರ್ಕಿ ನನ್ನನ್ನು ಟ್ರ್ಯಾಕ್‌ಡ್ರೆಸ್‌ನಲ್ಲಿ ಗುರುತೇ ಹಿಡಿಲಿಲ್ಲ! ಬೊಗಳೊದನ್ನ ನಿಲ್ಲಿಸಿಬಿಡ್ತು. ರಸ್ತೆ ಆಚೆಯಿಂದ ಹೋಗುವಾಕಿ ಈಚೆಯಿಂದ ಬಂದರೂ ಪ್ರತಿಕ್ರಿಯಿಸಲಿಲ್ಲ. ಕೆಲದಿನ ಹೋದಮ್ಯಾಲೆ ಬಾರ್ಕಿ! ಅಂತ ಕರದ್ರ ಬಾಲ ಅಲ್ಲಾಡಸ್ತಾ ಬರಬೇಕ?

ಈಜುಗೊಳಕ್ಕೆ ಮನೆಯ ಪಕ್ಕದ ಟೆನಿಸ್‌ಕೋರ್ಟ್‌ಗಳನ್ನು ದಾಟಿ ಹೋಗಬೇಕಾಗುತ್ತಿತ್ತು. ಮೊದಲಲ್ಲಿ ಸೀರೆಯುಟ್ಟೆ ಕೊಳಕ್ಕೆ ಹೋಗಿ ಕ್ಯುಬಿಕಲ್‌ದಲ್ಲಿ ಈಜುಡುಪು ತೊಡುತ್ತಿದ್ದೆ. ಟೆನಿಸ್ ಆಡುವ ನನ್ನ ಮಗ-ಸೊಸೆಯಂದಿರ ಸ್ನೇಹಿತರು ಇದ್ದಾರೆ ಅವರೆಲ್ಲ ಹಾಯ್! ಹೇ!ಗಳಿಂದ ಸ್ವಾಗತಿಸಿ ಸುಪ್ರಭಾತ ಹಾರೈಸುವದೇ ಅಲ್ಲದೇ ದಿನವೂ ಸೀರೆಯನ್ನು ನೋಡಿ–Fantastic, lovely, wonderful ಉದ್ಗಾರಗಳು ಅವರಿಂದ ಹೊರಡುತ್ತಿದ್ದವು. ಈಗ ಸೊಸೆಯಿಂದಾಗಿ ಸ್ಕರ್ಟ್ ಟೀಶರ್ಟ್‌ಗಳಿಂದ ನನಗೆ ಅರ್ಧಗತಿ ಒದಗಿತ್ತು! ದಿನವೂ ಸಿಗುತ್ತಿದ್ದ ಗ್ರೀಟಿಂಗ್ ಅಂದು ಸಿಗಲೇ ಇಲ್ಲ! ಒಬ್ಬಾಕೆ ನಿನ್ನ ಮೊಮ್-in-law ಬರಲೇ ಇಲ್ಲವೇ? ಎಂದಾಗ ಅಲ್ಲಿದ್ದ ಕಿಮ್ ನನ್ನನ್ನು ಹಿಂದಿನಿಂದ



ತೋರಿಸಿದಳಂತೆ. ನನ್ನ ಸೀರೆಗೆ ಸಿಕ್ಕ ಮಾನ, ಸ್ಕರ್ಟ್‌ಗೆ ದಕ್ಕದೇ ಹೋಯ್ತು!

ಆದರೆ ನನಗೆ ಪ್ರಿಯವಾದ ಅಜ್ಞಾತವಾಸದ ನೆಮ್ಮದಿ ನನ್‌ದಾತು. ಅಮೇರಿಕನ್‌ರ ದೊಡ್ಡಗುಣಾ ಅಂದ್ರ ಅವರು ಯಾರನ್ನೂ ಪಿಳಿಪಿಳಿ ಕಣ್ಣಿಟ್ಟು ನೋಡಿ ಮುಜುಗರ ಮಾಡುವುದಿಲ್ಲ. ಹೊಸಬರನ್ನ ಕಂಡು ಪಿಸಿಪಿಸಿ ನಗುದಿಲ್ಲ. ಹಾದು ಹೋದ ಮ್ಯಾಲ

ನಮ್ಹಾಂಗ ಕುಹಕ ಮಾತು ನಗಿಗೆ ಅವಕಾಶ ಕೊಡುದಿಲ್ಲ. ಕಾಮೆಂಟ್ ಮಾಡೋದಿಲ್ಲ. ಅಮೇರಿಕಾ ದಕ್ಷಿಣದ ಅಲಬಾಮದಲ್ಲಿ ಬೆಳಗಿನ ತಿರುಗಾಟದಲ್ಲಿ ನಾನು ತಲೆಯೆತ್ತಿ ಯಾರನಾದ್ರೂ ನೋಡಿದ್ರ ನಸುನಗೆ ಬೀರಿ good morning ಹೇಳಿ ಮುಂದೆ ಹೋಗ್ತಾರ. ಪರಿಚಯ–ಸ್ನೇಹ ಬೇಕಂತಿಲ್ಲ.

ಈ ವಾಕ್‌ನಲ್ಲಿ ಒಬ್ಬ ಶ್ವಾನಮಿತ್ರ ನನಗ ಸಿಕ್ಕ. ಬೃಹತ್ ಆಕಾರದ ದೊಡ್ಡಕಿವಿ, ದೊಡ್ಡ ರೋಮಾವಳಿಯ ಬೆರ್–ಲೆಬ್ರೆಡೋರ್ ಅಂತೆ! 'ಬರ್ಟಿ' ಎಂದು ಅದರ ಒಡತಿ ಪರಿಚಯಿಸಿದಳು. ಆಕಾರ ಅಶ್ವಲದ್ದಾಗಿದ್ದರೂ ಕಣ್ಣು, ಮುಖ, ಧ್ವನಿಗಳು ಮುದ್ದಾಗಿದ್ದವು. ಮೊದಲ ಪರಿಚಯಕ್ಕೆ ನನ್ನನ್ನು ಅಂವ ಮೆಚ್ಚಿಕೊಂಡ ಹಾಂಗ ಕಾಣಸ್ತು. ದಿನಾಲು ನನ್ನ ಬಳಿ ಬಂದು ಮುಖಕಿವಿ ನೇವರಿಸಿಕೊಂಡು, ಬೆನ್ನು ಚಪ್ಪರಿಸಿಕೊಂಡು ಹೋಗ್ತಿದ್ದ. ಒಂದು ಬೆಳಿಗ್ಗೆ ಬರ್ಟಿ ಕಾಣಿಸಲಿಲ್ಲ. ಹಾಗೇ ನಡೆದು ಹಳ್ಳವೊಂದರ ಮೇಲೆ ಹಾಕಿದ ಮರದ ಸೇತುವೆ ದಾಟಿ ಹೋಗ್ತಾ ಇದ್ದೆ. ಧಡ್! ಧಡ್! ಎಂದು ಇಡೀ ಸೇತುವೆ ಅಲುಗಾಡಿ ಹಳ್ಳಕ್ಕೆ ಬೀಳೋ ಹಾಗಾತು. ಹಿಂದಿನಿಂದ ರವಕೆಯ ಕೆಳಗಿನ ಬರಿದಾದ ಬೆನ್ನನ್ನು ಪರಚಿದಂತಾಗಿ ಹೌಹಾರಿ, ಧ್ವನೀನ ಹೊರಡಲಿಲ್ಲ! ಅಷ್ಟರಲ್ಲಿ ಬರ್ಟಿ!ಬರ್ಟಿ! ಅಂತ ಒಡತಿ ಓಡಿ ಬಂದ್ರು, ತನ್ನನ್ನು ಗಮನಿಸದೇ ಬಂದದ್ದಕ್ಕೆ ಬರ್ಟಿ, ಮೈನೇವರಿಕೆ, ಬೆನ್ನು ಚಪ್ಪರಿಸುವಿಕೆ ಒಂದೆರಡು ಮುದ್ದಿನ ಮಾತುಗಾರಿಕೆ ತಪ್ಪಿಸಿಕೊಳ್ಳಲು ಮನಸ್ಸಿಲ್ಲದೆ ಹಿಂಬಾಲಿಸಿ ಬಂದಿದ್ದ. ಆ ಆತುರದಲ್ಲಿ ನನ್ನ ಸೀರೆ ಸೆರಗಿನ ಚುಂಗು ಅವನ ಕೊರಳ ಬೆಲ್ಟಿನ ಬಕಲ್ಗೆ ಸಿಕ್ಕರೆ, ರವಕೆಯ ಕೆಳಗಿನ ಬರಿ ಬೆನ್ನಿಗೆ ಉಗುರು ಗೀರಿತ್ತು. ಸರಿ ಕೊಂಚ ಉಗುರಿನ ಪರಚಿದ ಗಾಯವಾದರೂ, ಸೀರೆಸೆರಗು ಹಳ್ಳಕ್ಕೆ ಬೀಳುವುದನ್ನು ತಪ್ಪಿಸಿತ್ತು. ಬರ್ಟಿಗೆ ಎಂದಿನ ಬಾಯುಪಚಾರ, ಕೈಉಪಚಾರ ಸಲ್ಲಿಸಿ ಮನೆಗೆ ಬಂದರೆ, ನನ್ನ ಸಾಹಸ ಕೇಳಿ ಕಿಮ್ ಹೌಹಾರಿದಳು. ಏನೇನೋ ಬಾಮ್, ಆಯಿಂಟಮೆಂಟ್ ತಂದು ಬೆನ್ನಿಗೆ ತಿಕ್ಕಿದಳು. Antiseptic ಗುಳಿಗೆ ನುಂಗಿಸಿದಳು. Titanus ಎಂದೆಲ್ಲ ಹೇಳುತ್ತಿರುವಲ್ಲಿ ಗೀರು ಮಾಯವಾಗಿತ್ತು. ಸಾಕಿದ ನಾಯಿ, ಅಲ್ಲದೇ ಸಾಕಿದವರೆಲ್ಲ ಉಗುರು, ಅಧ್ವಾನವಾಗಿ ಬೆಳೆಯುವ ರೋಮರಾಶಿ ಕತ್ತರಿಸಿ ಆರೈಕೆಮಾಡುತ್ತಾರೆ. ಆದರೆ ಈ ನೆವದಿಂದ ವಾಕ್ ಹೊತ್ತಿಗೆಲ್ಲ ಸೀರೆ ಉಡಲೇ ಕೂಡದು! ಎಂದು ಸೊಸೆ ತಾಕೀತು ಮಾಡಿದ್ಲು. ನಾನೂ ಅದನ್ನ ಕರಾರುವಾಕ್ ಆಗಿ ಪಾಲಿಸಲಿಕ್ಕೆ ಹತ್ತಿದೆ.

ಈ ಬಾರಿ ವಾರಾಂತ್ಯಕ್ಕೆ ಬೀಚ್‌ಗೆ ಹೋಗಿ ಇಡೀದಿನ ಅಲ್ಲಿ ಕಳೆಯೋದು, ಅಂತ ಮಗ–ಸೊಸಿ ಪ್ಲಾನ್ ಹಾಕಿದ್ರು. ನನಗೂ ಬರೊಹಂಗ ಬಲವಂತ ಮಾಡಿದ್ರು. ಕಿಮ್ ಹೇಳಿದಳು: "ಅಮ್ಮಾ ನೀನು ಅಲ್ಲಿ ಬಂದಾಗ ಸಮುದ್ರದಲ್ಲಿ ಈಜುತ್ತಿ ಅಷ್ಟೇ"

ಕಡಲಿನಲ್ಲೇ ಪ್ರಾಥಮಿಕ ಈಜು ಕಲಿತಿದ್ದ ನಾನು ಉತ್ಸಾಹದಿಂದ ಹೌಹೌದು! ಎಂದೆ.

"ಹಾಗಾದರೆ ನೀನು ಬಿಕಿನಿ ತೊಡಬೇಕು. ಎಲ್ಲಾ ವಯಸ್ಸಿನವರೂ ಅಲ್ಲಿ ಬಿಕಿನಿಯನ್ನೇ ಹಾಕುತ್ತಾರೆ. ಇವತ್ತೆ ಸಂಜೆ ಮಾಲ್‌ಗೆ ಹೋಗೋಣ. ನಿನಗಾಗಿ ಬಿಕಿನಿ ಕೊಳ್ಳೋಣ ಬಾಡಿಗೆಯದು ಬೇಡ!" ಎಂದಳು.

ಬಿಕಿನಿ? ಉಳಿದೆಲ್ಲ ಉಡುಪು ರೂಢಿಸಿಕೊಂಡರೂ, ಈ ಬಾರಿಯ ಸ್ತ್ರೀಕೌಪೀನ ಧಾರಣೆಯಾದ 'ಬಿಕಿನಿ'ಗೆ ನಾನು ಸಿದ್ಧಳಿರಲಿಲ್ಲ. ಆದರೆ ಸೊಸೆಯ ಜೊತೆ ವಾದಕ್ಕೂ ಇಳಿಯಲಿಲ್ಲ. ಸೊಂಟ ನೋವು, ಕಾಲುಸೆಳೆತ, ತಲೆಭಾರಗಳು ನಾನು ಹೇಳಿದಂತೆ ಕೇಳುತ್ತಾ ತಾಳಹಾಕಲಾರಂಭಿಸಿದವು! ನನಗೆ ಇಲ್ಲಿಯ ಹವೆ ಒಗ್ಗುವುದಿಲ್ಲವೆಂದು ಮಗ–ಸೊಸೆಗೆ

ನಂಬಿಸಿದೆ. ಅಲ್ಲಿಯ ಸ್ವಚ್ಛಹವಾ, ಶುದ್ಧನೀರು, ಶಾಂತ ಪರಿಸರಗಳನ್ನು ಉಲ್ಲೇಖಿಸದೇ ನನ್ನ ಬೆಂಗಳೂರಿನ pollution ಎಡಬಿಡದ ಟ್ರಾಫಿಕ್, ಕಿವಿಗೆ ನೋವು ಕೊಡೊ ಸದ್ದು, ಧಡಕಿರಸ್ತೆ, ಧೂಳು ಮಿಸ್ ಮಾಡ್ತೀನಿ ಅಂತ ಹೇಳ್ಳ್ಯಾ? ಬಿಕಿನಿ ವಿಹಾರ ಪ್ರಾರಂಭವಾಗುವ ಮೊದಲೇ ಬೆಂಗಳೂರಿಗೆ ಕಂಬಿಕಿತ್ತೆ.

ಆದರೆ, ನಿಮಗೊಂದು ಗುಟ್ಟು ಹೇಳ್ಳ್ಯಾ? ಸನಾತನ ಭಾರತದ ಮೆರೆವ ಕರ್ನಾಟದೇಶದ ಮಕುಟಮಣಿ, ಬೆಂಗಳೂರಿನ ಮಲ್ಲೇಶ್ವರದ ಮಧ್ಯಭಾಗದಲ್ಲಿರುವ ನಾನು ವಾಸಿಸುವ ನಮ್ಮ ಶಶಿಕಿರಣ್ ಅಪಾರ್ಟಮೆಂಟ್ಸದೊಳಗ, ಮಾರ್ನಿಂಗ್ ವಾಕ್‌ಗೆ ನನ್ನ ಸಮವಯಸ್ಕರು ಒಬ್ಬರೂ ಸೀರೆ ಉಡೋದಿಲ್ಲ! ವಾಕ್‌ಗೆ ಸರಿ ಹೋಗುವ ಪಾಶ್ಚಾತ್ಯ ಡ್ರೆಸ್ ತೊಡ್ತಾರ ನಖಶಿಖಾಂತ! ಅತಿ ಹಳಬರು ಅಂದ್ರೆ ಚೂಡೀದಾರ್ ಧರಿಸುತ್ತಾರೆ. ನಾನು ಮಾತ್ರ ಸೀರೆಗೆ ಬೈಬೈ ಹೇಳದೇ, ಬಿಕಿನಿಗೂ ಬೈಯದೇ, ವ್ಯಕ್ತಿ ಸ್ವಾತಂತ್ರ್ಯದಲ್ಲಿ ಪೂರ್ಣ ವಿಶ್ವಾಸ ಇಟ್ಟು ನನ್ನ ಡ್ರೆಸ್ ಕೋಡ್, ನನಗೊಬ್ಬಳಿಗೇ ಮೀಸಲು ಎಂದು ಸೀರೆಯನ್ನೇ ಉಟ್ಟು, ಆದರೆ ರೀಬಾಕ್ ಶೂ ಧರಿಸಿ, ಜಂಬದಿಂದ ಕೈ ಬೀಸುತ್ತ ನಡೆಯುತ್ತೇನೆ. ನಡೆಯೋರ ಭಾಗ್ಯ ನಡೀತಾನ ಇರ್ತದ!

■

# ಟ್ರಾನ್ಸ್‌ಫರ್ ಅವಾಂತರ!

ಟ್ರಾನ್ಸ್‌ಫರ್ ಅನ್ನೊ ಇಂಗ್ಲಿಷ್ ಅಷ್ಟಾಕ್ಷರಿ ಶಬ್ದ, ಸರಕಾರಿ ನೌಕರಸ್ಥರಿಗೆ ಸಿಂಹಸ್ವಪ್ನ! ಅನ್ನೋರು ಇದ್ದಾರ! ಇನ್ನೂ ಕೆಲವರು, ಮೂರು ಮೂರು ವರ್ಷಕ್ಕೆ ಸರಕಾರಿ ಖರ್ಚಿನಲ್ಲೆ ಊರೂರು ತಿರುಗಾಡಲಿಕ್ಕೆ ಸಿಗ್ತದಲ್ರಿ! ಎಂಥಾ ಛಲೋ ಚಾನ್ಸ್! ಅದರಾಗೂ ಕ್ವಾರ್ಟರ್ಸ್ ಇರೋ ಖಾತೆಯ ನೌಕರಿ ಇದ್ರಂತೂ ಭಾರೀ ಅನುಕೂಲ! "ಮನಿ ಹುಡುಕೋತ ಹೋಗೋ ತಾಪತ್ರಯ ತಪ್ತದ! ಪ್ರತಿಸಲ ಹೊಸಾ ಊರಿಗೆ ಹೋಗಿ ಹಾಜರ್ ಆದ ಕೂಡ್ಲೆ, "ಹೊಸದಾಗಿ ಬಂದಾರ ಪಾಪ!" ಅಂತ ಸಹೋದ್ಯೋಗಿಗಳ, ಪರಿಚಿತರ ಆತಿಥ್ಯ, ಸಹಕಾರ ಸಹಾನುಭೂತಿಗಳೆಲ್ಲಾ ವರ್ಷದ ಮಟ ಸಿಗ್ತಾವ! ಇನ್ನೊಂದು ವರ್ಷ adjust ಆಗೋದರೊಳಗ ಕಳೀತದ. ಮೂರನೆಯ ವರ್ಷ, ಹೊಸದಾಗಿ ಬದಲಿ ಆಗಿ ಬಂದ ನಿಮ್ಮ ಸಹೋದ್ಯೋಗಿಗಳಿಗೆ, ನಿಮಗೆ ಸಿಕ್ಕಂತಹ ಆತಿಥ್ಯ–ಸಹಕಾರ ಕೊಡಬೇಕೋ? ಕೊಡಬಾರದೋ? ಅಂತ ಪರಾಮರ್ಶೆ ಮಾಡೊದರೊಳಗ, ನಿಮ್ಮ ಎತ್ತಂಗಡಿ ಆಗಿರತದ! ಹೀಂಗಾಗಿ ಹೊಸಬರ ಆತಿಥ್ಯದ ಜವಾಬ್ದಾರಿ ಇಲ್ಲದನs ನೀವು ಒಂದರ ಹಿಂದೊಂದು send-off party ಮೇಜವಾನಿ ಸ್ವೀಕರಿಸ್ತಾ, ನಗ್ತ–ನಗ್ತಾ ಊರುಬಿಡಬಹುದು!" ಅಂತ ಮ್ಯಾಲಿಂದ ಮ್ಯಾಲ ಟ್ರಾನ್ಸಫರ್ ಆಗ್ತಾ ಇರೋ ಸಿನಿಕ್ ಹಿಂಗ ಹೇಳ್ತಾರಂತ.

ನನ್ನ ಮಟ್ಟಿಗೆ ಟ್ರಾನ್ಸ್‌ಫರ್ ಅಂದರ ಹುಟ್ಟಾ ಅಂಟಿದ ನಂಟುರೀ! ನನ್ನ ತಂದೆ ಪೋಸ್ಟ ಮಾಸ್ತರ ಆಗಿದ್ರು, ಬುದ್ಧಿ, ಬರೋ ಮೊದ್ಲಿಂದನಾ, ಉತ್ತರಕರ್ನಾಟಕದ ಧಾರವಾಡ ಉತ್ತರಕನ್ನಡ ಜಿಲ್ಲಾ ಸಣ್ಣಸಣ್ಣ ಊರೊಳಗ, ನನ್ನ ಬಾಲ್ಯ ಕಳೀತು. ದೊಡ್ಡದೊಡ್ಡ ಟ್ರಂಕ್, ಅಡಿಗೆ ಪಾತ್ರ–ಪಡಗಕ್ಕ ದೊಡ್ಡ ಬೆತ್ತದ ಪೆಠಾರಾ! ನಂ ಜೋಡಿನs ಊರೂರು ತಿರಗತಿದ್ವು ಟ್ರಂಕುಗಳು ಸೋಫಾ ಆಸನದ ಕೆಲಸ ಮಾಡಿದರ, ಪೆಠಾರೆ, ಕಣ್ಣುಮುಚ್ಚಾಲೆ ಆಟದಾಗ, ಅಡಗಿ ಕೂಡಲಿಕ್ಕೆ ಪ್ರಶಸ್ತ ತಾಣ ಆಗಿರತಿತ್ತು! ಮುಂದ ಮದುವೆ ಆದ ಮ್ಯಾಲಸುದ್ದಾ ಟ್ರಾನ್ಸ್‌ಫರ್ ಪರಂಪರೆ ಮುಂದವರೀತು. ದೊಡ್ಡ ಹಳೇ ಟ್ರಂಕುಗಳನ್ನ ಕನ್ಯಾದಾನದ ಜತೀಲೆ ನನಗ ಕೊಟ್ಟು ನಮ್ಮ ತಂದೆ ಕೈ ತೊಳಕೊಂಡರು!

ಬೆಲೆಯುಳ್ಳ ಸಾಮಾನಿನ ಸಾಗಾಣಿಕೆಗೆ ನನ್ನವರು, ಭಾಳ ಸುಲಭದ ಉಪಾಯ ಹುಡುಕಿದ್ರು! ಹಳೇ ಗೋಣಿಚೀಲ ಅಥವಾ ಅಂಥಾದ್ದೇ ಕೈಚೀಲ. ಫೋಟೊಗ್ರಾಫರ್ ಆಗಿದ್ದ ನನ್ನವರಿಗೆ ಯಾವಾಗಲೂ ಕ್ಯಾಮರಾ ಬೇಕಾಗತಿತ್ತು. ಬೆಲೆಬಾಳೋ ಕ್ಯಾಮರಾ, ಟೆಲಿಲೆನ್ಸ, ಫ್ಲ್ಯಾಶ್, ಝೂಮ್‌ಲೆನ್ಸ್, ಮುಂತಾದವನ್ನು ಗೋಣಿಚೀಲದೊಳಗ ತುಂಬಿ ಕಳ್ಳನ ಕಣ್ಣಿಗೆ ಮಣ್ಣು ಎರಚತಿದ್ರು! "ಹಿಂಗ ಮಾಡಿದ್ರೆ ನೋಡು, ಯಾರೂ ಅದರ ಕಡೆ ಕಣ್ಣೆತ್ತಿ ಸುದ್ದಾ ನೋಡೋದಿಲ್ಲ! ಸಣ್ಣದಾಗಿ ಒಂದಕಡೆ ಹೆಸರ ಬರದರ, ಒಂದಾನು ವೇಳೆ ಮರೆತರೂ, ಸ್ಟೇಶನ್‌ದಿಂದ ತಿರುಗಿ ಬಂದು ಆ ಸಾಮಾನು ನಂ ಕೈ ಸೇರತಾವ!" ಅಂತ ಅನತಿದ್ರು, ಒಮ್ಮೆ ಪ್ಲೇನ್ ಪ್ರವಾಸ ಕೂಡಾ ಇಂಥಾ ಗೋಣಿಚೀಲ ಹಿಡದs

ಮಾಡಿದ್ದು ನೆನಪಾಗ್ತದ. ಅವರು ಎಂದೂ ಯಾವ ಸಾಮಾನೂ ಕಳಕೋತಾ ಇರಲಿಲ್ಲ. ನನ್ನ ತದ್ವಿರುದ್ಧ.

ಲಗ್ನಾ ಆದಮ್ಯಾಲ ಸೈತ, ಹತ್ತಾರು ಟ್ರಾನ್ಸ್‌ಫರ್ ಕಂಡೆ. ಆಗಿನ ಆಕಾಶವಾಣಿಯೊಳಗ ಪ್ರದೇಶ, ರಾಜ್ಯ, ಮೀರಿ ನಿಂತ ಟ್ರಾನ್ಸ್‌ಫರ್ ವ್ಯವಸ್ಥಾ ಇತ್ತು. ಇಂಥ ಸಂದರ್ಭದೊಳಗಿನ ನನ್ನ ಕೆಲವು ನೆನಪುಗಳನ್ನು ಹೇಳ್ತಿನಿ.

ಭಾಳಹಿಂದೆ, ಧಾರವಾಡದಿಂದ ನನ್ನ ಟ್ರಾನ್ಸ್‌ಫರ್ ರಾಜಸ್ಥಾನದ ಜಯಪುರಕ್ಕೆ ಆತು. ಆಗಿನ್ನೂ ಕರ್ನಾಟಕ, ಮೈಸೂರುರಾಜ್ಯ ಆಗಿತ್ತು. ಬೆಂಗಳೂರ ಭಾಗ್ಯದ ವಿಚಾರ ಭಾಳ ಜನರಿಗೆ ಗೊತ್ತಿರಲಿಲ್ಲ. ವೀರಪ್ಪನ್‌ನ ವೀರಗಾಥೆ ಆಗಲಿ, ನರಕಕ್ಕೆ ರಹದಾರಿ ಆಗಿರೋ ಮಹಾನಗರದ ರಸ್ತೆಗಳೇ ಆಗಲಿ, ಸಿಲಿಕಾನ್ ವ್ಯಾಲಿ, ಸಾಫ್ಟ್‌ವೇರ್ ಇಂಜಿನಿಯರಿಂಗ್ ಸ್ವರ್ಗ! ಎಂದಾಗಲಿ ಅಂತರ್‌ರಾಷ್ಟ್ರೀಯ ಖ್ಯಾತಿ ನಮ್ಮ ರಾಜ್ಯದ ನಮ್ಮ ರಾಜಧಾನಿಗೆ ಬಂದಿರಲಿಲ್ಲ ನೋಡ್ರಿ! ಹಿಂಗಾಗಿ ದಕ್ಷಿಣ ಭಾರತೀಯರೆಲ್ಲ ಅಲ್ಲಿಯವರಿಗೆ ಮದ್ರಾಸಿಗಳೇ ಆಗಿದ್ದರು. ಮದ್ರಾಸಿ ಅನಿಸಿಕೊಳ್ಳಿಕ್ಕೆ ನನ್ನ ಮನಸ್ಸು ಒಪ್ಪಿರಲಿಲ್ಲ! ಹೀಂಗಾಗಿ "ಆಪ್ ಕಹಾಂಕಿ ಹೈ ಮಿಸೆಸ್ ಕ್ಯಾಮಟ್?" ಅಂದ್ರ, "ಸೌತ್ ಇಂಡಿಯನ್ ಹೂಂ!" ಅಂತಿದ್ದೆ. ಆದರೆ ಅವರೋ "ಕ್ಯಾ ಕಹಾ? ಆಪ್ ಸೌತ್ ಇಂಡಿಯನ್! ಮತಲಬ್ ಮದ್ರಾಸಿ ಥೋಡಿ ಹೈಂ! ಆಪ್ ಮಹಾರಾಷ್ಟ್ರೀಯನ್ ಹೈಂ!" ಎಂದು ನನ್ನನ್ನು ತಿದ್ದತಾ ಇದ್ದರು. ಹೆಸರು, ಜೊತಸನಾ ಕರ್ಮಠ ಅಥವಾ ಕ್ಯಾಮತ್ ಅಂತ ರೂಪಾಂತರ ಪಡೀತು. ಕನ್ನಡತಿ ಹೋಗಿ ಮರಾಠೀ ಆದೆ. ಟ್ರಾನ್ಸ್‌ಫರ್‌ದ ಖರೇ ಅಂತರ–ಅವಾಂತರ ಆತು.

ಸದ್ಯ, ವ್ಯಕ್ತಿತ್ವ ಅಥವಾ Identity ಬದಲಾಗದಿದ್ರ ಸಾಕು. ನಾಲಗಿಮ್ಯಾಲ ಕನ್ನಡ ಉಳದ್ರ ಸಾಕು! ಅನ್ನೋ ದಿನಗಳಲ್ಲಿ ಶಕಾರರ ನಾಡಿಗೆ ಟ್ರಾನ್ಸ್‌ಫರ್ ಆತರೀ! ಸಶಷ ಅನ್ನೋ ಅಂತರ ಚಿಕ್ಕಂದಿನಿಂದ ರೂಢಿಸಿಕೊಂಡಿದ್ದೆ. ನನ್ನ ಅಜ್ಜಿ ಸಗುಣಕ್ಕ. ನನಗೆ ಉಷಾ ಅಂತ ಅಕ್ಕ, ಪ್ರಕಾಶ ಅಂತ ತಮ್ಮ ಇದ್ದಾರ. ಅಜ್ಜಿ ಸನೋ, ಉಷಾನ ಷನೋ?, ಪ್ರಕಾಶನ ಶನೋ? ಅಂತ ನೆನಪಿಡಲಿಕ್ಕೆ ಸರಳ ಆಗಿತ್ತು. ಈಗ ಈ ಮೂರು ಅಕ್ಷರಗಳು ಒಂದೆ ಅಕ್ಷರಕ್ಕಿಂತ ಉಚ್ಚಾರ ಒಂದೇ ಇರೋ ನಾಡಿನಲ್ಲಿ ಭಾಳ ಕಷ್ಟಕ್ಕೆ ಬಂತು! ಬಂಕಿಂಚಂದ್ರ, ಈಶ್ವರಚಂದ್ರ ವಿದ್ಯಾಸಾಗರರ ನಾಡಿನಲ್ಲಿ ಅವರ ಸುಂದರ ಭಾಷೆ ಕಲೀಲೆ ಬೇಕು ಅಂತ ಬಂಗಾಲಿ ಮಾಷ್ಟರ ಹತ್ತರ ಕಾಗುಣಿತಾಕ್ಷರ ಕಲೀಲಿಕ್ಕೆ ಸುರುಮಾಡ್ದೆ. ಪಫಬಭಮದೊಳಗಿನ ಬಭ ಹಾಗೂ ಯರಲ ಆದ ಮೇಲೆ ಬರೋ 'ವ' ಆ ಭಾಷೆಯೊಳಗ ಒಂದೇ ಇರಬೇಕ! ಕನ್ನಡ ನಾಲಗಿ ಬರದಾಂಗ ಉಚ್ಚರಿಸಿತ್ತು. ಮಾಷ್ಟ್ರ ಬೇಸತ್ತು ಎಲ್ಲರಿಗೆ ಪರಿಚಿತವಿರುವ ('v' ವ, ವೆನಿಲಾ) ಆಯ್ಸ್‌ಕ್ರೀಂ ಅಕ್ಷರದಿಂದ you must pronounce ಬೆ correctly! you know ಭೆನಿಲಾ ಆಯ್ಸ್‌ಕ್ರೀಂ? you must always remember that ಭೆ ಭೆನಿಲಾ ಆಯ್ಸ್‌ಕ್ರೀಂ! ಎಂದು ತಿದ್ದಿದರು. ನನ್ನ ವಂಗಭಾಷೆಯ ಕಲಿಕೆ ವೆನಿಲಾ ಆಯ್ಸ್‌ಕ್ರೀಂಗೆ ಮುಕ್ತಾಯ ಆತು! ಇಲ್ಲಿಯೂ ನನ್ನ ಹೆಸರು ಜ್ಯೋತಸನಾ ಕುಮಾರಿ ಕಾಮತ! ಆಯಿತು!

ಟ್ರಾನ್ಸ್‌ಫರ್‌ಗಳಲ್ಲಿ ನಾಮಾಂತರ ಸಾಮಾನ್ಯ ಅಂತ ಅಂದಕೊಂಡರೆ ನಮ್ಮ ಆಹಾರ ವಿಚಾರಗಳಿಗೂ ಅದು ವ್ಯಾಪಿಸಬೇಕಾ? ಒಂದಿನಾ, ಇನ್ನೂ ಹಲ್ಲು ಮೂಡದ ಮಗು ವಿಕಾಸನಿಗೆ ಮೆತ್ತಗಿನ ಹಾಲು ಅನ್ನ ತಿನಿಸ್ತಾ ಇದ್ದೆ. ನೆರಮನೆಯ ಮೌಸಿಜೀ ಬಂದು ನೋಡಿ (ಏನು ಮಾಡುತ್ತಿದ್ದೆನೆಂದು ನೋಡಿ) ಹಣೆ ಬಡೆದುಕೊಂಡರು.

"ಬೆಹನಜೀ, ಏನು ಮಾಡ್ತಾ ಇದ್ದೀಯಾ? ಅಕ್ಕಿ-ಅನ್ನ ಮಗುವಿಗೆ ಮೀರಿದ ಹಾನಿ ಮಾಡುತ್ತದೆ!" ಎಂದರು.

"ಯಾಕೆ ಹಾಗಂತೀರಿ?" ದಿಗ್ಭ್ರಮೆಯಿಂದ ಕೇಳಿದೆ. "ಅನ್ನವೆಂಬುದು ಶಿಶುವಿನ ಹೊಟ್ಟೆ ಸೇರಿದೊಡನೆ ಸಿಮೆಂಟ್ ಕಾಂಕ್ರೀಟ್ ಆಗಿಬಿಡುತ್ತೇ! ರಾಮ್‌ರೆ! ರಾಮ!" ಅಂದ್ರು, "ಹಾಗಾದರೆ ಮಗುವಿಗೆ ಹಾಲಿನ ಹೊರತು ಇನ್ನೇನು ಕೊಡಲಿ?" ಎಂದು ಕೇಳಿದೆ "ಅಯ್ಯೋ ಮಂಕೆ! ಫುಲ್ಕಾವನ್ನು ಹಾಲಿನಲ್ಲಿ ನೆನೆಸಿ ತಿನ್ನಿಸು! ಅದರಂಥಾ ಉತ್ಕೃಷ್ಟ ಆಹಾರ ಇಲ್ಲ" ಶಿಶುಸಂಗೋಪನದ ಮೊದಲ ಪಾಠವನ್ನು ಹಿಂದೀ ಭಗಿನಿ ಕಲಿಸಿದಳು.

ಇನ್ನೊಂದು ಕೇಂದ್ರದಲ್ಲಿ ಕಾಶ್ಮೀರಿ ಮಹಿಳೆ ನಮ್ಮ ವಿಕಾಸನನ್ನು ತುಂಬಾ ಹಚ್ಚಿಕೊಂಡಿದ್ದರು. ಒಮ್ಮೆ, ನಮ್ಮಲ್ಲಿ ಬಂದಾಗ, ಅವನಿಗೆ ಬಾಳೆಹಣ್ಣು ತಿನ್ನಿಸ್ತಾ ಇದ್ದದ್ದು ನೋಡಿ ಕೂಡಲೇ ನಿಲ್ಲಿಸಲು ಹೇಳಿದರು. "ಬಾಳೆಹಣ್ಣು ಲಿವರ್‌ಗೆ ಹಾನಿಕಾರಿ ಅಷ್ಟೆ ಅಲ್ಲ, ಮಗುವಿನ ನಾಲಿಗೆ ಹಾಗೂ ಮಿದುಳು ದಪ್ಪಗೆ ಮಾಡುತ್ತದೆ!" ಎಂದರು.

ಮಕ್ಕಳಿಗೆ ಹಣ್ಣು ತಿನ್ನಿಸಲು ಡಾಕ್ಟರ್ ಹೇಳುತ್ತಾರಲ್ಲ.? ನಾನೆಂದೆ. "ನಿಜ! ಎಪ್ಪಲ್ ತಿನ್ನಿಸು. ರಕ್ತ ಸಾಫಾಗುತ್ತದೆ! ಮೈಗೆ ಕಾಶ್ಮೀರಿ ಗುಲಾಬಿ ಬಣ್ಣ ಬರುತ್ತದೆ!" ಹಲ್ಲುಬಾರದ ಮಗುವಿಗೆ ಬಾಳೆಹಣ್ಣಿನ ಬದಲಾಗಿ ಎಪ್ಪಲ್ ತಿನ್ನಿಸುವ ಕ್ರಮದ ಬಗ್ಗೆ ಯೋಚಿಸಿದೆ.

ಕಲಕತ್ತಾ ಟ್ರಾನ್ಸ್‌ಫರ್‌ದಲ್ಲಿ ಸಿಕ್ಕಾಪಟ್ಟೆ ಕೂದಲು ಉದುರಲಾರಂಭಿಸಿತು. ತಲೆಗೆ ಉರಿ ಬಂದಿದೆ! ಸಾಸಿವೆ ಎಣ್ಣೆ ತಟ್ಟಿಕೋ! ಸ್ನೇಹಿತೆಯರು ಸೂಚಿಸಿದರು. ನಮ್ಮ ಅತ್ತೆಯವರು ಕಾಲುನೋವಿಗೆ ಸಾಸಿವೆ ಎಣ್ಣೆ ತಿಕ್ಕಿಕೊಳ್ತಾ ಇದ್ದರು. ಅದರಲ್ಲಿಯ ಕಾವು-ಅತ್ಯುಷ್ಣತೆ ಉಗ್ರ! ನೋವು ಕಡಿಮೆ ಮಾಡುತ್ತದೆ! ಎಂದು ಅವರ ಅಂಬೋಣ. ಹೀಗಾಗಿ, ಒಳ್ಳೆ ಸಾಸಿವೆ ಎಣ್ಣೆಕೊಂಡು ಅವರಿಗೆ ಕಳಿಸಿದ್ದೆ. ಈಗ ಸಾಸಿವೆ ಎಣ್ಣೆ ನಖಶಿಖಾಂತ ತಂಪು ಒದಗಿಸುವ ವಿಚಾರ ಕಲಿತೆ.

ನಾವು ಕಾರವಾರದಲ್ಲಿದ್ದಾಗ ಧಾರವಾಡೀ ಕುಟುಂಬ ನೆರೆಮನೆಗೆ ಬಂದಿತ್ತು. ಮನೆಯಾಕೆ ಹೆರಿಗೆಗೆ ಹೋದ ಮನೆಯಲ್ಲಿ ಮೂವರು ಬ್ಯಾಚೆಲರ್‌ರು ಓರ್ವ 'ಸ್ಯುಡೋಬ್ಯಾಚೆಲರ್' ಸ್ವಯಂ-ಪಾಕಕ್ಕೆ ಇಳಿದರು. ಅದಕ್ಕೆ ಕಾರಣ, ಅಲ್ಲಿ ಹೋಳೆ ಅಥವಾ ಕಡಲ ಬಾಳೆಕಾಯಿ ಪ್ರಧಾನ ತರಕಾರಿಯಾಗಿದ್ದು ಅಲ್ಲ, "ಹೊಟೇಲಿಗೆ ಹೋದ್ರ, ಎಲ್ಲಾ ಅಡಿಗೆಗೂ ಶುದ್ಧ-ಶಾಕಾಹಾರಕ್ಕೂ ಒಂಥರಾ ವಾಸನೀರಿ!" "ಎಂಥಾ ವಾಸನಿ?" ಕುತೂಹಲ ತಡೆಯದೆ ಕೇಳಿದೆ. "ಹೆಣ್ಮಕ್ಕಳ ತೆಲಿ ವಾಸನಿರಿ! ಅನುಭವಿಯ ಮಾತು. ಝಗ್ ಅಂತ ತಲೆಯಲ್ಲಿ ಪ್ರಕಾಶಬಿತ್ತು. ಆಗ ನಮ್ಮ ಜಿಲ್ಲೆಯಲ್ಲೆಲ್ಲ ತೆಂಗಿನೆಣ್ಣೆಯ ಪ್ರಯೋಗವೇ ಪ್ರಚಾರದಲ್ಲಿ ಇತ್ತು. ಅಲ್ಲಿ ಸಾಕಷ್ಟು ಅಗ್ಗವೂ ಇತ್ತು. ಕರಾವಳಿಯ ಕೂಸುಗಳಿಗೆ ತಾಜಾ ತೆಂಗಿನೆಣ್ಣೆ ಘಮಘಮ ತುಪ್ಪವನ್ನೂ ಹಿಂದೆ ಹಾಕ್ತದ ಅನಿಸಿದ್ರ ಕುಸುಬಿ-ಸೇಂಗಾ ಎಣ್ಣೆ ರೂಢಿಯ ಜನರಿಗೆ ಕೊಬ್ರಿ ಎಣ್ಣೆ ವಾಸನೆ ಹಿಡಿಸದೇ ಇದ್ದದ್ದು ಸಹಜ ಇತ್ತು.

ತಮಗೆ ಚಿರಪರಿಚಿತವಿದ್ದ, ರೂಢಿಯಾಗಿರುವ ಆಹಾರ-ಉಪಚಾರಗಳೇ ಸರ್ವೋತ್ಕೃಷ್ಟ! ಎಂದು ಎಲ್ಲರೂ ನಂಬ್ತಾರ. ರಾಜಸ್ತಾನಿಗೆ ಅನ್ನ, ಕಾಶ್ಮೀರಿಗೆ ಬಾಳೆಹಣ್ಣು ಧಾರವಾಡಿಗೆ ಕೊಬ್ರಿಎಣ್ಣೆ ಅಪಥ್ಯವಾಗಿದ್ದರೆ ಆಶ್ಚರ್ಯವಿಲ್ಲ!

ಈ ಟ್ರಾನ್ಸ್‌ಫರ್‌ಗಳ ಸ್ಥಳಾಂತರ, ಭಾಷಾಂತರಗಳಿಂದ ಒಂದು ಫಾಯದೆ ಖಂಡಿತ ಆಗತದ! ಒಂದೇ ಜಾಗಾಕ್ಕೆ attachment ಅಥವಾ ಮೋಹ ಬೆಳೆಯೋದಿಲ್ಲ. ಮುಕ್ಕಾಲು ಸರ್ವಿಸ-ಅನಿಶ್ಚಿತತೆಯೊಳಗ ಕಳೀತದ. ಹೊಸ ಊರು ಸೇರಿದಾಗ, ಹಳೇದು ಛಲೋ

ಇತ್ತು ಅನಸ್ತದ! ತನ್ನದಲ್ಲದ ಊರು, ರಾಜ್ಯಕ್ಕೆ ಒಗ್ಗಿಕೊಂಡು ಅಲ್ಲಿ ಮನೆ ಮಾಡಿ ನೆಲೆಸಿದವರೂ ಇದ್ದಾರ. ಅದೇ ಬೆಂಗಳೂರಿಂದ ತಾತ್ಪೂರ್ತಿಕವಾಗಿ ಸಹಾ ಹೊರಗೆ ಹೋಗುವವರಿಗೆ ಫಿಲ್ಟರ್ ಕಾಫಿ ಇಲ್ಲದಿದ್ದರೆ, ನೀರ ಹೊರತೆಗೆದ ಮೀನಿನಂತೆ ಚಡಪಡಿಕೆ ಸುರು ಆಗ್ತದ. ಆದ್ರ ಹೊಸ ಅಡಗಿ ಕಲೀಲಿಕ್ಕೆ, ಹೊಸ ಹೊಸಾ ನಮೂನಿ ಹೊಲಿಗಿ ಕಲೀಲಿಕ್ಕೆ, ಹೊಸಾ ಸ್ನೇಹಿತೆಯರು ಸಿಗುವಂಥ ಅಪರೂಪದ ಅವಕಾಶಗಳು ಟ್ರಾನ್ಸ್‌ಫರ್ ಅವಾಂತರದಲ್ಲೂ ಬೆಳ್ಳೀ ರೇಖೆ ಆಗಿರತಿದ್ವು. ಬ್ಯಾರೇ ಬ್ಯಾರೇ ಸಂಸಾರಗಳ ರಸನಿಮಿಷಗಳನ್ನು ಪಿಸಿ ಪಿಸಿ ಮಾತು, ವಕ್ರ, ವ್ಯಂಗ್ಯ ನಡವಳಕಿ ತಿಳಕೊಳ್ಳಿಕ್ಕೆ ವಠಾರಕ್ಕಿಂತ ಭಲೋ ಕ್ಲಬ್ ಯಾವುದು ಆದ ಹೇಳ್ರಿ? ಟಿ.ವಿ. ಬರೋ ಮುನ್ನ ಹೊಸದಾಗಿ ಟ್ರಾನ್ಸ್‌ಫರ್ ಆಗಿ ಬರೋ ಕುಟುಂಬದ ಕುರಿತಾದ ಹೊಸ ಹೊಸ ಮಾಹಿತಿನ, ಅಕ್ಕಪಕ್ಕದವರಿಗೆ 'ಆಜಕೀ ತಾಜಾ ಖಬರ್!' ಆಗಿರತಿತ್ತು. ಆ ಕುಟುಂಬ ಹಳಬ ಆಗೋತನಕ.

ನನಗಂತೂ ಟ್ರಾನ್ಸ್‌ಫರ್ ಅಂದ್ರ ಎಷ್ಟು ಮೈ ಉಂಡ ಹೋಗಿತ್ತಂದ್ರ, ನಾ ರಿಟೈರ್ ಆಗಿ, ಪಾರ್ಟಿ ಕೊಟ್ಟ ದಿನಾ ಸೈತ, ಕಣ್ಣಾಗಿಂದ ಒಂದ ಹನಿ ನೀರ ಉದುರಲಿಲ್ಲ. ರಿಟೈರ್ ಅಂದ್ರ ಟ್ರಾನ್ಸ್‌ಫರ್ ಇದ್ದಂಗ! ಈ ಖೋಲಿಯಿಂದ ಆ ಖೋಲಿಗೆ! ಆಫೀಸ್ ಟೇಬಲ್‌ನಿಂದ ಡಾಯನಿಂಗ್ ಟೇಬಲ್ ಅನ್ನೋ ಅಷ್ಟು ಸಲೀಸಾಗಿ ನಿವೃತ್ತಳಾದೆ. ನನ್ನ ಮಟ್ಟಿಗೆ ಟ್ರಾನ್ಸ್‌ಫರ್ ಅವಾಂತರ ಬರೇ ಸ್ಥಳಾಂತರ ಆದದ್ದು ಖರೇ!. ■

# ಅಧಿಕಾರಿಯ ಅಡಾವುಡಿ !

ಇದು ಸುಮಾರು ಅರ್ಧಶತಮಾನದ ಹಿಂದಿನ ಕತೆ. ಅಖಿಲ ಭಾರತ ಆಕಾಶವಾಣಿ (AIR)ಗೆ ಅಧಿಕಾರಿಗಳನ್ನು ಭರ್ತಿಮಾಡುವ ಉದ್ದೇಶದಿಂದ ಕೇಂದ್ರ ಲೋಕಸೇವಾ ಆಯೋಗವು ನೂರಾರು ಜಾಗಗಳ ಭರ್ತಿಯ ಕರೆ ನೀಡಿತ್ತು. M.A.B.Ed ಮಾಡಿಯೂ ನೌಕರಿ ಸಿಗುವುದು ಕಷ್ಟಸಾಧ್ಯವಾದ ದಿನಗಳು. ನಂತರದ ದಶಕದಲ್ಲಿ ಒಮ್ಮಿಂದೊಮ್ಮೆ ಕಾಣಿಸಿಕೊಂಡ ಪ.ಪೂರ್ವ ಕಾಲೇಜುಗಳಾಗಲಿ, ಡಿಗ್ರಿಕಾಲೇಜುಗಳಾಗಲಿ ಇರಲಿಲ್ಲ. ಆರ್ಥಿಕ ಸ್ವಾವಲಂಬನ ಅತಿ ಮುಖ್ಯವಾಗಿದ್ದರಿಂದ, ಅರ್ಜಿಯನ್ನು ದೌಡಾಯಿಸಿದೆ. ಆಯೋಗದವರು ಕೇಳಿದ ಹತ್ತಿಪ್ಪತ್ತು ದಾಖಲೆಗಳ ಯಥಾ ಪ್ರತಿ (True Copy)ಗಳನ್ನು ಕಳಿಸಬೇಕಾಗಿದ್ದರಿಂದ ಅವುಗಳ ಮೇಲೆಲ್ಲ ಗೆಝೆಟೆಡ್ ಅಧಿಕಾರಿಯ ರುಜು ಬೇಕಾಗಿತ್ತು. ಸರಿ! ಅಂಥ ಅಧಿಕಾರಿಯೊಬ್ಬರ ಶೋಧ ಪ್ರಾರಂಭವಾಯ್ತು. ನನ್ನ ಓರ್ವ ಸ್ನೇಹಿತೆಯ ಪರಿಚಿತರನ್ನು ಹುಡುಕಿಕೊಂಡು ಹೋದರೆ ಅವರು ರಜೆಯ ಮೇಲಿದ್ದರು. ಇನ್ನೊಬ್ಬರು ಪುರುಸೊತ್ತಿಲ್ಲವೆಂದರು. ಮೂರನೆಯವರ ಬಳಿ ಹೋಗಿ ಕಾದುಕುಳಿತು ಕ್ಯೂನಿಂತು, ಮೂಲಪ್ರತಿಗಳನ್ನು ತೋರಿಸುತ್ತ ಅವರ ಸಹಿ ಹಾಕಿಸಿ, ಪ್ಯೂನ್‌ನಿಂದ ಮೊಹರು ಒತ್ತಿಸಿದ ಯಥಾಪ್ರತಿಗಳನ್ನು ತರಬೇಕಾದರೆ ದಿನವಿಡೀ ಕಳೆದಿತ್ತು. ಆಗಲೇ ಪ್ರತಿಜ್ಞೆ ಮಾಡಿದೆ. ಒಂದು ವೇಳೆ ನಾನು ಗೆಝೆಟೆಡ್ ಆಫೀಸರ್ ಆದರೆ, ನಾನು ಇಂಥ ಸಹಿಗೆ ಬರುವ ಎಳೆಯರನ್ನು ಒಂದು ನಿಮಿಷವೂ ಕಾಯಿಸದೇ "ನಿತ್ಯ ಹಸ್ತಾಕ್ಷರ ದಾಸೋಹ"ವನ್ನೇ ಮಾಡಿ ಕೊನೆಗೆ ನಿವೃತ್ತಳಾಗುತ್ತೇನೆ ! ಎಂದು.

ಅದೇನೋ ಸುದೈವ. ನಾನು ಆಕಾಶವಾಣಿಯ ಪತ್ರಾಂಕಿತ ಅಧಿಕಾರಿಗಳ, ಲೇಖೀಕ ಮೌಖಿಕ ಪರೀಕ್ಷೆಗಳಲ್ಲಿ ಆಯ್ಕೆ ಆಗಿ, ಆಕಾಶವಾಣಿ ಕೇಂದ್ರಕ್ಕೆ ನೇಮಕಗೊಂಡೆ. ದೂರದರ್ಶನ ಇನ್ನೂ ಮೂರು ದಶಕ ಮುಂದಿತ್ತು. ಆಕಾಶವಾಣಿಯೇ ಜನಕೋಟಿಗೆ ಶೀಘ್ರವಾಗಿ ತಲುಪುವ ಮುಖ್ಯ ಮಾಧ್ಯಮವಾಗಿತ್ತು. ಅಲ್ಲಿಯ ಸಂಗೀತಗಾರರು, ನಾಟಕಪಾತ್ರಧಾರರು ವಾರ್ತಾವಾಚಕರೆಲ್ಲ ಚಲಚ್ಚಿತ್ರದ ಬಳಿಕದ 'ಸ್ಟಾರ್' ಬೆಲೆ ಪಡೆದವರಾಗಿದ್ದರು ಎಂದರೆ ತಪ್ಪಾಗಲಾರದು.

ಅಧಿಕಾರಿ ಎಂದರೆ ಒಂದು ಸ್ವತಂತ್ರ ಆಫೀಸ್ ರೂಮು, ಟೇಬಲ್ ಖುರ್ಚಿಗಳು. ಹೊರಗಡೆ ಕಾಯುತ್ತ ಕುಳಿತುಕೊಳ್ಳುವ ಸಿಪಾಯಿ. ಆತ ಬೆಲ್ ಮಾಡಿದೊಡನೆ ಬಂದು ಚಹ ತಂದು ಕೊಡುವ ಅಥವಾ ಕಾಯುತ್ತ ಕುಳಿತ ಹೊರಗಿನವರನ್ನು ಒಬ್ಬೊಬ್ಬರಾಗಿ ಒಳಗೆ ಬಿಡುವ, ಮುದ್ರೆ ಒತ್ತಲು ಸದಾಸಿದ್ಧನಿರುವ, ವ್ಯವಸ್ಥೆ ಇರುತ್ತದೆ ಎಂಬ ಕಲ್ಪನೆಯಿತ್ತು. ಆದರೆ ಅವರಿವರನ್ನು ಕೇಳಿಕೊಂಡು ಆಕಾಶವಾಣಿಗೆ ಹೋಗುತ್ತೇನೆ, ಅಲ್ಲಿಯ ಸೆಂಟ್ರಲ್ ಹಾಲ್ ಎಂದು ಕರೆಸಿಕೊಳ್ಳುವ ಕೊಠಡಿಯಲ್ಲಿ ನನ್ನದೇ ಗ್ರೇಡಿನ ಇನ್ನೂ ಒಂಭತ್ತು ಅಧಿಕಾರಿಗಳು ಸುತ್ತ ಆಸೀನರಾಗಿದ್ದರು! ಎಲ್ಲರಿಗೂ ಒಬ್ಬನೇ ಪ್ಯೂನ್. ದಶಮಗ್ರಹವಾಗಿ ಬಂದ ಈ ಸ್ಟಾರ್‌ಗೆ ಖುರ್ಚಿ ಅಥವಾ ಟೇಬಲ್ ಇರಲಿಲ್ಲ ! "ಹೊಸಾ 'ಪೆಕ್ಸ್'ಗೆ ಜಾಗ

ಇಲ್ಲವಲ್ಲೋ ! ಸ್ಟೆಕ್ಸ್‌ಗೆ ಹೇಳಪ್ಪಾ!" ಎಂದರು, ನಾನು ಪರಿಚಯಿಸಿಕೊಂಡ ಹಿರಿಯರೆಂದು ಕಂಡು ಬಂದ ಅಧಿಕಾರಿ. "ಅವರು ಗರಾಜ್‌ಗೆ ಹೋಗ್ಯಾರೀ!" ಎಂದು ಜವಾನನು "ಅವರು ಬರೋಮಟಾ ಕುಂಡರ್ರೀ!" ಎಂದು ಚಿಕ್ಕ ಟೇಬಲ್ ಮತ್ತು ಕುಂಟುತ್ತಿದ್ದ ಮೂರುಕಾಲಿನ, ಮುರಿದ ಇನ್ನೊಂದು ಕಾಲಿಗೆ ಕಲ್ಲಿನ ಆಧಾರಕೊಟ್ಟು, ಸೀಟು ಮಾಡಿದ, ಈ ಎಲ್ಲಪ್ಪ ಅಂಜುತ್ತ "ಬ್ಯಾಲೆನ್ಸ್ ಮಾಡಿಕೊಂಡು ಆ ಖುರ್ಚಿಯಲ್ಲಿ ಕುಳಿತೆ. ನನಗೇನು ಗೊತ್ತು? ಸರ್ವಿಸ್ ಮುಗಿಯೋ ಮಟ ಈ ಅಧಿಕಾರಿ ಬ್ಯಾಲೆನ್ಸಿಂಗ್ ಮಾಡುತ್ತಲೇ ಇರಬೇಕಾಗುತ್ತದೆಂದು! ಗೆಝೆಟೆಡ್ ಆಫೀಸರ್‌ಗಳಿಗೆಲ್ಲ, ನಾನಾ ಬಗೆಯ ಅರ್ಜಿಗಳಿಗೆ True Copyಗೆ ಸಹಿ ಮಾಡುವದೇ ಮುಖ್ಯಕಾಯಕವೆಂದು ನಂಬಿದಾಕೆಗೆ ಇಲ್ಲಿ ಇನ್ನೂ ಒಂಭತ್ತು ಜನ ಅಂಥವರು ಸಸಾರವಾಗಿ ಸಿಗುತ್ತಾರೆ ! ಎಂದು ಪಿಚ್ ಅನಿಸಿತು.

ಹಿರಿಯ ಸಹೋದ್ಯೋಗಿ, ಕಿತ್ತೂರ ಅನ್ನುವವರಿಗೆ ಹೇಳಿ ಕಳಿಸಿದರು, ಅಚ್ಚುಕಟ್ಟಾಗಿ ಡ್ರಸ್ ಮಾಡಿಕೊಂಡು ಬೀಗುತ್ತ ಬಂದ ಓರ್ವ ಯುವಕನನ್ನು "ಇವರು ನಿಮ್ಮ ಪ್ರೋಗ್ರಾಮ್ ಸೆಕ್ರೆಟರಿ !" ಎಂದು ಪರಿಚಯಿಸಿದರು. ಅಮೇರಿಕನ್ ಇತಿಹಾಸ ಓದಿದಾಕೆಗೆ, ವಿದೇಶಿ ಸೆಕ್ರೆಟರಿ, ಗೃಹಖಾತೆಯ ಸೆಕ್ರೆಟರಿ ಎಂಬವರು ಅತ್ಯುಚ್ಚ ಅಧಿಕಾರಿಗಳಾಗಿರುತ್ತಾರೆ ! ಎಂಬ ಕಲ್ಪನೆಯಿತ್ತು. ನಮ್ಮ ದೇಶದಲ್ಲೂ ಹಿರಿಯ ICS ಅಧಿಕಾರಿಗಳಿನ್ನೂ ದಿಲ್ಲಿಯ ಕೇಂದ್ರ ಸಚಿವಾಲಯದಲ್ಲಿ ಸೆಕ್ರೆಟರಿಗಳಾಗಿದ್ದರು.

ನಾನು ಲಗುಬಗೆಯಿಂದ ಎದ್ದು ನಿಂತು, ಬಂದಾತನಿಗೆ ಎರಡೂ ಕೈ ಜೋಡಿಸಿ ನಮಸ್ಕಾರ ಹೇಳಿದೆ. ಕಕ್ಕಾವಿಕ್ಕಿಯಾದ ಆತ "ಮ್ಯಾಡಂ! ಏನಾದರೂ ಅರ್ಜೆಂಟ್ ಟ್ಯಾಪ್ ಮಾಡೋದಿದ್ರ ಕೊಡ್ರಿ !" ಎನ್ನಬೇಕೆ ? ಕೊನೆಗೆ ಗೊತ್ತಾಯಿತು. ನನ್ನ ಹುದ್ದೆಯಾಗಿದ್ದ Programme Executive ಗೆ ಸಹಾಯಕನಾದ ಟ್ಯಾಪಿಸ್ಟ್ + ಗುಮಾಸ್ತನಿಗೆ Programme Secretary ಎನ್ನುತ್ತಿದ್ದರು.

ಹುದ್ದೆ ಸಣ್ಣದಿದ್ದರೂ ಆಡಂಬರದ ದೊಡ್ಡ ಪದನಾಮಗಳು ಆಕಾಶವಾಣಿಯಲ್ಲಿ ಬಳಕೆಯಲ್ಲಿದ್ದವು. "ಪೆಕ್ಸ್" ಅಥವಾ ಪ್ರೋಗ್ರ್ಯಾಮ್ Executive ಎನ್ನುವವರು ಪ್ರಸಾರದ ವಿವಿಧ ಭಾಗಗಳ ಅಂದರೆ, ಮಹಿಳಾ ಮಕ್ಕಳ ಕೃಷಿ ಭಾಷಣ ಇತ್ಯಾದಿಗಳ ಮೇಲ್ವಿಚಾರಕರು. ನಿರ್ದೇಶಕರು ನಿಲಯದ ಮುಖ್ಯಸ್ಥರು. ಅವರ ಬಳಿಕದ ಅಥವಾ ಸಹಾಯಕ ನಿರ್ದೇಶಕರ ಬಳಿಕ ಪೆಈಸಿ ಇವರೇ ಮುಖ್ಯ ಕಾರ್ಯಕ್ರಮ ಅಧಿಕಾರಿಗಳಾಗಿ, ಪ್ರಸಾರದ ಯಾವತ್ತೂ ಓರೆ-ಕೋರೆಗಳಿಗೆ ಹೊಣೆಗಾರರಾಗಿದ್ದು ಶ್ರೋತೃಗಳಿಂದಲೂ, ಮೇಲಧಿಕಾರಿಗಳಿಂದಲೂ ಏಕಕಾಲದ ಪ್ರಹಾರಕ್ಕೆ ಯೋಗ್ಯರಾಗಿರುತ್ತಿದ್ದರು !

ನನಗೆ ಸ್ಟುಡಿಯೋಗಳ ಪರಿಚಯ ಮಾಡಿಕೊಡಲು ಹಿರಿಯ ಸಹೋದ್ಯೋಗಿ ಬಂದರು. ಕಾರಿಡಾರಿನಲ್ಲಿ ಕಾರ್ಯಕ್ರಮಗಳ ಲಾಗಿಂಗ್ ಮಾಡುತ್ತ ಕುಳಿತ ತರುಣಿಯನ್ನು ಟ್ರಾನ್ಸ್‌ಮಿಶನ್ ಎಕ್ಸುಕ್ಯುಟಿವ್ ! ಎಂದು ಪರಿಚಯಿಸಿದರು. ವಿವಿಧ ಯಾಂತ್ರಿಕ ಕೊಠಡಿಗಳು, ಸಿಬ್ಬಂದಿಯನ್ನು ಭೇಟಿ ಮಾಡಿಸಿ ತಿರುಗಿ ಬಂದಾಗ ಸ್ಟುಡಿಯೋ 'ಎಕ್ಸಿಕ್ಯುಟಿವ್' ಬಂದಿದ್ದ. ಕಾರುಗಳ ದುರಸ್ತಿ, ಓಡಾಟ, ಜವಾನರ ಓಡಾಟ ಅವರ ಮೇಲುಸ್ತುವಾರಿ, ಅವನ ಜವಾಬುದಾರಿ ! Transmission ನೋಡಿಕೊಳ್ಳುವವರು "ಟ್ರೆಕ್ಸ್" ಆದರೆ ಈತ "Stex" ಅನಿಸಿಕೊಳ್ಳುತ್ತಿದ್ದ. ಅಧಿಕಾರ ಇಲ್ಲದವರಿಗೆ, ಹಾಗೆಂದು ಕರೆಸಿಕೊಳ್ಳುವವರಿಗೆ ಈ ಪದಗಳೆಲ್ಲ ಅಂದರೆ 'ಎಕ್ಸಿಕ್ಯುಟಿವ್', 'ಸೆಕ್ರೆಟರಿ' ಅನಿಸಿಕೊಳ್ಳುವುದು ಖುಷಿಕೊಡುತ್ತಿತ್ತೋ, ಇಲ್ಲವೋ ಗೊತ್ತಿಲ್ಲ. ಹೊರಗಿನವರಿಗೆ ಮಾತ್ರ ಅವು ದೊಡ್ಡ ಹುದ್ದೆಗಳು ಎಂಬ ಭಾವನೆ ಉಂಟಾಗಿದ್ದರೆ

ಆಶ್ಚರ್ಯವಿಲ್ಲ ! ಸ್ಟುಡಿಯೋ ಎಕ್ಸಿಕ್ಯುಟಿವ್ ಒಬ್ಬಾತ ಆಗಿನ ಕಾಲಕ್ಕೆ ಮ್ಯಾಟ್ರಿಕ್ ಪಾಸಾದ, ಶ್ರೀಮಂತ ಮನೆತನದ ಕನ್ಯೆಯನ್ನು ಈ ಪದ ಪ್ರಯೋಗದಿಂದಲೇ ಮದುವೆ ಮಾಡಿಕೊಂಡಿದ್ದ!

ಈ ಎಲ್ಲ 'ಎಕ್ಸಿಕ್ಯೂಟಿವ್'ಗಳ ನಡುವೆ, ನನ್ನನ್ನು ಯಾರೆಂದು ಗುರುತಿಸಿಕೊಳ್ಳುವ ಹೊತ್ತಿಗೆ ಮಹಿಳಾ ಮತ್ತು ಮಕ್ಕಳ ಕಾರ್ಯಕ್ರಮಗಳ ಮೇಲುಸ್ತುವಾರಿ ಕೊರಳಿಗೆ ಬಿದ್ದಿತ್ತು. ಅಂದರೆ ಬಂದವರಿಗೆ ನೀರುಕುಡಿಸುವ, ರಿಹರ್ಸಲ್ ಮಾಡಿಸುವ, ಕಾರ್ಯಕ್ರಮಗಳನ್ನೆಲ್ಲ ಮಾಡಿಸುವ ಹಸ್ತಪ್ರತಿ ಓದಿ ತಿದ್ದುವ, ಕಾಗದ ಪತ್ರಗಳಿಗೆ ಸಹಿ ಮಾಡಿಸುವ, ಚೆಕ್ ಕೊಟ್ಟು ಮನೆಗೆ ಕಳಿಸುವ ಯಾವತ್ತೂ ಜವಾಬ್ದಾರಿ – ಈ ಅಧಿಕಾರಿಯದು ! ಎಂದು ತಿಳಿಯಿತು. ಜೊತೆಗೆ ಅವತ್ತು ಬರಲಾಗದೇ ಕೈಕೊಟ್ಟ ಅಥವಾ ಸಿಬ್ಬಂದಿಯವರೇ ಕೊನೆಗಳಿಗೆಯಲ್ಲಿ ಬರೆದ ರೂಪಕ–ನಾಟಕಗಳಿಗೆ ಧ್ವನಿಯನ್ನೂ ನೀಡಬೇಕಾಗುತ್ತಿತ್ತು ! ದೈನಂದಿನ ಪ್ರಸಾರಗಳೆಲ್ಲ ನೇರ ಪ್ರಸಾರವಾಗಿರುತ್ತಿದ್ದವು (Live broadcast) ನೌಕರಿಗೆ ಹಾಜರಾದ ಕೆಲದಿನಗಳಲ್ಲೇ 'ಮಹಿಳಾಲೋಕ' ಪ್ರಸಾರವಾದೊಡನೆ ದೊಡ್ಡ ಸಾಹೇಬರಿಂದ ಕರೆ ಬಂದಿತು.

"ಹೋದೊಡನೆ, ಯು ವಿಲ್ ಲೂಸ್ ಯುವರ್ ಜಾಬ್! ಯು ಆರ್ ಸೋ ಕೆರಲೆಸ್!" (ನೀನು ನೌಕರಿ ಕಳೆದುಕೊಳ್ಳುತ್ತಿ ! ಈ ರೀತಿಯ ಅಲಕ್ಷ ತೋರಿದರೆ) ಎಂದು ಗರ್ಜಿಸಿದರು.

ಏನೂ ಅರ್ಥವಾಗದೇ ನಿಂತಿದ್ದೆ.

"ನೀನು ಈಗತಾನೇ ಪ್ರಸಾರವಾಗಿದ್ದ ಸಣ್ಣ ಕತೆಯ ಹಸ್ತಪ್ರತಿ 'ವ್ಹೆಟ್' ಮಾಡಿದ್ದೀಯಾ?"

"ಖಂಡಿತ! ಪ್ರತಿ ಸಾಲೂ ಓದಿದ್ದೇನೆ !"

"ಹಾಗಾದರೆ 'ಪಾರ್ಕರ್ ಪೆನ್ ಶಬ್ದ ಹೇಗೆ ಪ್ರಸಾರವಾಯಿತು ? ವಾಣಿಜ್ಯ ಶಬ್ದ (Commercial word) ಗಾಳಿಯಲ್ಲಿ ಹೋಗಬಾರದು ! ಎಂಬ ಪ್ರಾಥಮಿಕ ಜ್ಞಾನ ಇರಬಾರದೇ ? ಇದನ್ನು ರೂಢಿಸಿಕೊಳ್ಳದಿದ್ದರೆ ನಿನಗಿಲ್ಲಿ ಜಾಗವಿಲ್ಲ!" ಎಂದು ಅಂದು ತಿರುಗಿ ಫ್ಯಾಲ್‌ನತ್ತ ಮುಖ ಮಾಡಿದರು.

ಜೋಲು ಮುಖ ಹಾಕಿಕೊಂಡು, ಟೇಬಲ್ಲಿಗೆ ಮರಳಿದಾಗ ನೆನಪಾಗಿತ್ತು. ಜಾಹೀರಾತುಗಳಿಗೆ ಸರಕಾರಿ ಪ್ರಸಾರದಲ್ಲಿ ಅವಕಾಶವಿಲ್ಲ ! ಎಂದು. ಆದರೆ ಪಾರ್ಕರ್ ಪೆನ್ ಎಂಬ ಪ್ರಪಂಚದಲ್ಲಿ ಆಗಿನ ಫೌಂಟನ್ ಪೆನ್‌ಗಳಲ್ಲಿ ಶ್ರೇಷ್ಠ ಹೆಸರು ಪಡೆದಿದ್ದು ಇದು ಯಾವುದೇ ಮೂಲೆಯ, ತೀರ ಕಡಿಮೆ ಜನರ ಕಿವಿಗೆ ಬಿದ್ದಿರಬಹುದಾದ ಒಂದು ಶಬ್ದ. ಈ ದೇಶದ ವಿದೇಶೀ ಆಯಾತದ ಮೇಲೆ ಪ್ರಭಾವ ಬೀರಿ ನಾನು ನೌಕರಿ ಕಳೆದುಕೊಳ್ಳುವ 'ಪ್ರಮಾದ' ಹುಟ್ಟಿಸಬಹುದೆಂಬ ಕಲ್ಪನೆ ಬರಲಿಲ್ಲ.

ನನಗೋ, ಈ ಪ್ರಮಾದಕ್ಕೆ 'ಮೆಮೊ' ಎಂಬ ಲಿಖಿತ ಎಚ್ಚರಿಕೆ ತಪ್ಪಲಿಲ್ಲ!

ಇಷ್ಟಕ್ಕೆ ಮುಗಿಯಲಿಲ್ಲ ಗ್ರಾಚಾರ. ಸಂಗೀತ ವಿಭಾಗದ 'ಪೆಕ್ಸ್' ರಜೆಯ ಮೇಲೆ ಹೋಗಿದ್ದರಿಂದ ಅದು ನನ್ನ ಕೊರಳಿಗೆ ಬಿದ್ದಿತ್ತು.

ಒಂದು ಮಧ್ಯಾಹ್ನ ಶಾಸ್ತ್ರೀಯ ಸಂಗೀತದ ಕಾರ್ಯಕ್ರಮ ಪ್ರಸಾರವಾಗುತ್ತಿದ್ದಂತೆ ನಿರ್ದೇಶಕರ ಕರೆ ಬಂದಿತು. ಹೋದರೆ ಸಾಹೇಬರು ನಿಗಿನಿಗಿ ಕೆಂಡವಾಗಿದ್ದರು.

"ಈಗ ತಾನೇ ಯಾವ ರಾಗ ಪ್ರಸಾರವಾಯಿತು, ಹೇಳು?"

'ಸಾರಂಗದ ಪ್ರಕಾರ!' ಧೈರ್ಯದಿಂದ ಹೇಳಿದೆ. ಹಿಂದುಸ್ಥಾನಿ ಶಾಸ್ತ್ರೀಯ ಸಂಗೀತ ಕಾರ್ಯಕ್ರಮದಲ್ಲಿ ದಿನದ ವೇಳೆಗನುಸಾರವಾಗಿ ಆಯಾರಾಗಗಳು ಹಾಡಲ್ಪಡುತ್ತವೆ. ಸಾರಂಗ, ಮುಲ್ತಾನಿ ಮೊದಲಾದವು ಮಧ್ಯಾಹ್ನದ ರಾಗಗಳು.

ಘೂಂಕಾರ ಕೇಳಿಬಂದಿತು!



"ಲಂಕಾದಹನ ಸಾರಂಗ!" ನೆನಪಿಸಿಕೊಂಡು ಹೇಳಿದೆ. "ನಿನ್ನ ಕಾರ್ಯವೈಖರಿ ತೀರಾ ಎಬಡ (Shoddy) ಆಗಿದೆ! ಯಾವರಾಗವನ್ನು ಕಲಾವಿದ ಹಾಡುತ್ತಾನೆಂದು ಗೊತ್ತಿದ್ದೂ ನಿಷೇಧಿತರಾಗವನ್ನು ಪ್ರಸಾರ ಮಾಡಿದೆಯಲ್ಲ! ಇದೇ ರೀತಿ ಮುಂದುವರಿದರೆ ನೀನು ಇಲ್ಲಿರಲು ನಾಲಾಯಕ್ಕಳು (Unfit)! ಎಂದು ಐದು ನಿಮಿಷಕಾಲ ನನಗೂ, ನನ್ನನ್ನು ಆಯ್ಕೆ ಮಾಡಿದ UPSCಗೂ ಶಾಬ್ದಿಕ ಶ್ರದ್ಧಾಂಜಲಿ ಕೊಟ್ಟು ಬೀಳ್ಕೊಟ್ಟರು.

ಈಗಾಗಲೇ ಅವರ ಸಿಡುಕು, ಕಠಿಣ ಶಬ್ದಗಳ ಪ್ರಯೋಗದ ಅರಿವಾಗಿತ್ತು. ಆದರೆ, ನನ್ನಿಂದ ಘಟಿಸಿದ ಅಪರಾಧದ ಅರಿವಾಗಲು 'ಪೆಕೊ' (ಪ್ರೋಗ್ರ್ಯಾಂ ಎಕ್ಸಿಕ್ಯೂಟಿವ್ ಕೋಆರ್ಡಿನೇಶನ್) ಎಂಬ ಹಿರಿಯ ಸಹೋದ್ಯೋಗಿಯ ಸಹಾಯ ಪಡೆಯಬೇಕಾಯಿತು. ಅವರು ಹೇಳಿದಂತೆ, ನಮ್ಮ ದೇಶದ ಮಿತ್ರ ರಾಷ್ಟ್ರಗಳಿಗೆ ಅವಹೇಳನೆ ಅಥವಾ ನೋವು ಆಗುವಂಥ ಎಂಥ ಬಗೆಯ ಪ್ರಸಾರವೂ ನಿಷಿದ್ಧ! ಶ್ರೀಲಂಕಾ, ನಮ್ಮ ದೇಶದ ಮಿತ್ರರಾಷ್ಟ್ರ. ಅವರ ದೇಶದ ದಹನದ ಉಲ್ಲೇಖ ಬರುವ ಯಾವ ಶಬ್ದ, ರಾಗ, ತಾಳ ಪ್ರಸಾರವಾಗಲೇ ಕೂಡದು ! ಎಂದು ಆಕಾಶವಾಣಿಯ ನೀತಿ ಸಂಹಿತೆಯ ಪಾಠ ಹೇಳಿದರು. ಶತಮಾನಗಳ ಹಿಂದೆ ರಚಿತವಾಗಿದ್ದ ಪೌರಾಣಿಕ ಹಿನ್ನೆಲೆ ಇದೆಯೋ ಇಲ್ಲವೋ ಗೊತ್ತಿಲ್ಲದ, ನಿಷ್ಪಾಪಿ ರಾಗವೊಂದು ಆಧುನಿಕ ರಾಜಕಾರಣದ ಮೇಲೆ ಯಾವ ಕರಿನೆರಳು ಚೆಲ್ಲಬಹುದು? ಎಂದು ನನ್ನ ಚರಿತ್ರೆಯ ಅಧ್ಯಯನದ ಮನಸ್ಸು ಏನೂ ಅರ್ಥವಾಗದೇ ತಲ್ಲಣಗೊಂಡಿತು.

ಘನಸರಕಾರದ "ವಿದೇಶ"ಗಳ ಕುರಿತ ಪ್ರಸಾರ ನೀತಿಸಂಹಿತೆಯ ಪ್ರಥಮ ಪಾಠ,
ರಾಗ್ : "ಲಂಕಾದಹನ್ ಸಾರಂಗ್"ದಿಂದ ಪ್ರಾರಂಭವಾಗಿತ್ತು. ■

# ಮಿಸ್ ಮಾಡದ ಬಸ್

Don't miss your bus! ಬಸ್ ತಪ್ಪಿಸಿಕೋಬೇಡ! ಎಂಬ ಇಂಗ್ಲಿಷ್ ಲೋಕೋಕ್ತಿಯಿದೆ. ಆಕಸ್ಮಿಕವಾಗಿ ಒದಗಿದ ಅವಕಾಶ ಹುಸಿಹೋಗಗೊಡಬೇಡ, ಎಂಬುದು ಇದರ ಇಂಗಿತಾರ್ಥ. 'ಬದುಕು ಜಟಕಾಗಾಡಿ, ವಿಧಿಯದರ ಸಾಹೇಬ!' ಎಂದು ಡಿ.ವಿ.ಜಿ ತಮ್ಮ ತಾರುಣ್ಯದಲ್ಲಿ ಉದ್ಗರಿಸಿದ್ದರು. ಈಗಿನ ದಿನಗಳಲ್ಲಿ ಬದುಕನ್ನು ನಿಂತು ನಿಂತು ಹೋಗುವ ಬಸ್ಸಿಗೆ ಹೋಲಿಸಬಹುದೇನೋ! ಈ ಬಸ್ ಯಾತ್ರೆಯಲ್ಲಿ ಹತ್ತಿದಾಗಿನಿಂದ ಹಲವಾರು ನಿಲ್ದಾಣಗಳನ್ನು ಕಾಣುತ್ತ ಹೋಗುತ್ತೇವಷ್ಟೆ? ನಡುವಿನ ನಿಲ್ದಾಣದಲ್ಲಿ ಆಕಸ್ಮಿಕವಾಗಿ ಬಸ್ ತಪ್ಪಿಸಿಕೊಳ್ಳುವದೂ ಇದೆ. ಒಂದು ಮಿಸ್ಸ್ ಮಾಡಿದ ಇಂಥ ಘಟನೆಯಿಂದಲೇ ಬದುಕೆಂಬ ಬಸ್‌ಯಾತ್ರೆಯ ಕೆಲ ಅನುಭವಗಳನ್ನು ಹೇಳಬಹುದೇನೋ!

ಹಿರಿಯ ನಾಗರಿಕರಿಗಾಗಿಯೇ ಕಾರ್ಯಕ್ರಮವೊಂದನ್ನು ಪ್ರಾರಂಭಿಸಬೇಕೆಂದು ದಿಲ್ಲಿಯಿಂದ ನಿರ್ದೇಶ ಬಂದಾಗ, ಕೇಂದ್ರಕ್ಕೇ ಹಿರಿಯಳೆಂದು ನಿರ್ದೇಶನಾಲಯವೂ, ಸಿಬ್ಬಂದಿಯೂ, ಶ್ರೋತೃಗಳೂ ಒಪ್ಪಿಕೊಂಡಿದ್ದರಿಂದ ಮತ್ತು ವಯಸ್ಕಳೇ ಕಾರ್ಯಕ್ರಮ ರೂಪಿಸಲು ಯೋಗ್ಯಳೆಂಬ ನಂಬಿಕೆಯಿಂದ ಈ ಕಾರ್ಯಕ್ರಮ ವಹಿಸಿಕೊಂಡು ಕೆಲ ಅಪರೂಪದ ಹಿರಿಯರ ಹುಡುಕಾಟ ಪ್ರಾರಂಭಿಸಿದೆ. ನನ್ನ ವಿದ್ಯಾ ಗುರುಗಳಾದ ಪ್ರೊ॥ ಜಿ.ಎಸ್ ದೀಕ್ಷಿತರು ಕೆಲವು ಪ್ರತಿಭಾವಂತರ ಹೆಸರುಗಳನ್ನು ಸೂಚಿಸಿದರು. ಅವರಲ್ಲಿ ದಿ. ಬೆಳವಾಡಿ ವೆಂಕಟಲಕ್ಷಮ್ಮನವರ ಹೆಸರು ಪ್ರಮುಖವಾಗಿತ್ತು. ಮೈಸೂರು ವಿಶ್ವವಿದ್ಯಾಲಯದ ಪ್ರಥಮ ಎಮ್.ಎ. ಪದವೀಧರೆಯಾದ ಇವರು ಡಾ॥ ಕುವೆಂಪು, ಎಲ್. ಗುಂಡಪ್ಪ, ಪ್ರೊ॥ ಕೆ. ವೆಂಕಟರಾಮಪ್ಪ ಮೊದಲಾದವರ ಸಹಪಾಠಿಯಾಗಿದ್ದವರು. ಕಟ್ಟಾಸಂಪ್ರದಾಯಸ್ಥ ಮನೆತನಕ್ಕೆ ಸೇರಿದವರು. ಮಡಿ, ಮೈಲಿಗೆ, ಉಪವಾಸ, ವ್ರತ-ನೇಮಗಳನ್ನು ತುಂಬ ಶ್ರದ್ಧೆಯಿಂದ ಪಾಲಿಸುತ್ತಿದ್ದವರು. ಇಂಥ ಮಹಿಳೆ ಶಿಕ್ಷಣ ಖಾತೆಯಲ್ಲಿ ನೌಕರಿ ಹಿಡಿದು, ಊರೂರು ತಿರುಗಿ, ತಮ್ಮ ಖಾಸಗಿ ಜೀವನಕ್ಕೆ ವ್ಯತ್ಯಯ ಬಾರದಂತೆ ವೃತ್ತಿ ಜೀವನ ಸಾಗಿಸಿ, ಖಾತೆಯಲ್ಲಿ ಉನ್ನತ ಅಧಿಕಾರಿಯಾಗಿ(ಡಿಡಿಪಿಐ) ನಿವೃತ್ತರಾದವರು. ಆದ್ದರಿಂದ ಇವರ ವೈವಿಧ್ಯಮಯ ಅನುಭವಗಳನ್ನು 'ಬಾಳ ಬೆಳಕಿನ' ಶ್ರೋತೃಗಳಿಗೆ ನೀಡುವದೆಂದು ನಿರ್ಧರಿಸಿದೆ. ಫೋನಿನಲ್ಲಿ ಕೇಳಿದಾಗ ಆ ಕೂಡಲೇ ಒಪ್ಪಿಕೊಂಡರು. ನನ್ನ ಕೋರಿಕೆಯಂತೆ ತಾನು ಓದಿದ ಇಪ್ಪತ್ತನೇ ಶತಮಾನದ ಎರಡನೆಯ ದಶಕದ ಸಮಾಜ, ಶಿಕ್ಷಣ ಹಾಗೂ ವೃತ್ತಿ ಜೀವನದ ಸ್ಥೂಲ ಪರಿಚಯ ಕುರಿತ ಬಾನುಲಿ ಭಾಷಣದ ಸ್ಕ್ರಿಪ್ಟ್ ಕೂಡ ಬರೆದರು. ಅದನ್ನು ನನ್ನ ಗುರುಗಳ ಮೂಲಕ ಮನೆಗೆ ತಲುಪಿಸಿದರು. ಮರುದಿನ ಮಧ್ಯಾಹ್ನದ ಬಳಿಕ ಧ್ವನಿ ಮುದ್ರಣಕ್ಕೆ ಬರುವವರಿದ್ದರು. ಮರುದಿನ ಬೆಳಗಾಗುತ್ತಿದ್ದಂತೆ ನನ್ನ ಗುರುಗಳು ಫೋನಿಸಿದರು. "ವೆಂಕಟಲಕ್ಷಮ್ಮನವರು ಇನ್ನಿಲ್ಲ!" ಎಂದು. ಮುನ್ನಾ ದಿನ ಪ್ರೊ॥ ದೀಕ್ಷಿತರು ಅವರನ್ನು

ಮಾತನಾಡಿಸಿಕೊಂಡು ಬಂದಿದ್ದರು. ನಿದ್ರೆಯಲ್ಲಿಯೇ ಅಸುನೀಗಿದಾಗ ಅವರಿಗೆ 88 ವಯಸ್ಸು. ತುಂಬ ಲವಲವಿಕೆಯಿಂದ ದಿನವಿಡೀ ಒಂದಿಲ್ಲೊಂದು ಚಟುವಟಿಕೆಯಲ್ಲಿ ತೊಡಗಿರುತ್ತಿದ್ದರು. ಅಡಿಗೆ, ಓದು, ಸಾಮಾಜಿಕ ಸೇವೆ, ವ್ಯಾಖ್ಯಾನ, ಭಜನೆಗಳಲ್ಲಿ ಮೈಮರೆಯುತ್ತಿದ್ದವರು. 'ಸೌಂದರ್ಯ ಲಹರಿ'ಯನ್ನು ಹೇಳಿಕೊಡುತ್ತಿದ್ದರು. ಮಹಿಳಾ ಅಧ್ಯಯನದಲ್ಲಿ ಆಸಕ್ತಿ ಹೊಂದಿದ್ದರಿಂದ ಅವರನ್ನು ವ್ಯಕ್ತಿಗತವಾಗಿ ಭೇಟಿಮಾಡಿ ಮುಕ್ಕಾಲು ಶತಮಾನದ ಅಪೂರ್ವ ಅನುಭವಗಳನ್ನೆಲ್ಲ ಕಲೆ ಹಾಕುವ ಸದವಕಾಶವನ್ನು ಕಳೆದುಕೊಂಡೆನಲ್ಲ ಎಂದು ಮಿಡುಕಿದೆ. ಮಾಡುವದೇನು? ಆಗ ಬಸ್ ಮಿಸ್ಸ್ ಮಾಡಿದ್ದೆ! ಅವರ ಧ್ವನಿಯಲ್ಲಿ ಒಂದೇ ಒಂದು ಕಾರ್ಯಕ್ರಮ ಪ್ರಸಾರ ಮಾಡುವ ಅವಕಾಶವೂ ತಪ್ಪಿ ಹೋಗಿತ್ತು.

ಇಲ್ಲಿಗೆ ಮುಗಿಯಲಿಲ್ಲ ಈ ಸತ್ಯ ಕಥೆ. ವೆಂಕಟಲಕ್ಷ್ಮಮ್ಮನವರ ಮನೆಯವರು ಆಕಾಶವಾಣಿಗೆ ಬರೆದುಕೊಟ್ಟ ಭಾಷಣದ ಪ್ರತಿಗಾಗಿ ಆಗ್ರಹ ಪಡಿಸಲಾರಂಭಿಸಿದರು! ಏಕೆ ಗೊತ್ತೆ? ತಮ್ಮ ಬಗ್ಗೆ ಹೆಚ್ಚು ಹೇಳಿಕೊಳ್ಳದ ಆ ಮಹಾತಾಯಿ ತಮ್ಮ ಜೀವನದ ಹಲವಾರು ಘಟನೆಗಳನ್ನು ವರ್ಷ- ದಿನಾಂಕಗಳೊಂದಿಗೆ ಆ ಭಾಷಣದಲ್ಲಿ ದಾಖಲಿಸಿದ್ದರು. ಅವರ ಜೀವನ ಸಾಧನೆ ಬಗ್ಗೆ ಸ್ವಂತ ಸಂಬಂಧಿಗಳಿಗೆ ಹೆಚ್ಚು ತಿಳಿದಿರಲಿಲ್ಲ. ಅವರ ಅಪ್ರಸಾರಿತ ಭಾಷಣದ ಪ್ರತಿಯನ್ನು ಅವರಷ್ಟೇ ಪ್ರತಿಭಾವಂತೆ ಅವರ ಸೋದರಿ, ಪ್ರೊ। ಎಚ್. ವಿ ಸಾವಿತ್ರಮ್ಮನವರಿಗಿತ್ತು, ಅದರಲ್ಲಿಯ ವಿವರಗಳನ್ನು ಆ ಹಿರಿಯ ಚೇತನಕ್ಕೆ ಆದ ನೆನಪುಗಳನ್ನು, ಪ್ರಸಾರ ಮಾಡಿದ್ದಾಯ್ತು. ಪ್ರಸಾರವಾಗದಿದ್ದರೂ ವೆಂಕಟಲಕ್ಷ್ಮಮ್ಮನವರು ಬರೆದ ಲೇಖನ ಮಹತ್ವದ ದಾಖಲೆಯಾಗಿ ಪರಿಣಮಿಸಿತು. ಮತ್ತು 'ಬಾಳು- ಬೆಳಕು' ಕಾರ್ಯಕ್ರಮ ಅದಕ್ಕೆ ಕಾರಣವಾಯಿತು.

ಬದುಕಿನಲ್ಲಿ ಒಂದು ಅನುಕೂಲವಿದ್ದರೆ, ಇನ್ನೊಂದಿಲ್ಲ. ಒಂದು ಲಾಭಾಂಶವಿದ್ದರೆ ಮೂರು ಹಾನಿಕಾರಕವಾಗಿರುತ್ತವೆ ಎಂಬುದನ್ನು ಎಲ್ಲರೂ ಅನುಭವದಿಂದ ಕಂಡುಕೊಂಡ ವಿಚಾರಗಳೇ. ಆದರೆ, ಎಲ್ಲರೂ ಲಾಭಾಂಶಗಳ ಬೆನ್ನು ಹತ್ತಿದರೆ, ಬದುಕಿನ ಬಸ್ ಮಿಸ್ಸ್ ಮಾಡುವದು ಖಂಡಿತ. 'ಆದ್ದರಿಂದ ಸಿಕ್ಕಿದ ಬಸ್ ಹತ್ತಿ ಹೋಗಲು ಕಲಿ. ನಿಲ್ದಾಣದಲ್ಲಿ ಸಮಯ ಸಿಕ್ಕರೆ ಸುತ್ತಲ ಜನಜೀವನ ಕಣ್ಣಲ್ಲಿ ಕಣ್ಣಿಟ್ಟು ನೋಡು ಮತ್ತು ದಿನಚರಿಯಲ್ಲಿ ಬರೆದಿಡು!' ಎಂದು ನನ್ನವರ ಹಿತೋಕ್ತಿ. ಈ ಎರಡನೇ ಮಾತು ಸಾಧಿಸದ್ದರಿಂದ ಬಸ್ಸಿಗೆ ಕಾಯುತ್ತ ಪುಸ್ತಕ ಓದುವ ರೂಢಿ ಮಾಡಿಕೊಂಡಿದ್ದೆ.

ಮೂರು ವರ್ಷಗಳಿಗೊಮ್ಮೆ ವರ್ಗವಾಗುವ ನೌಕರಿಗೆ ಜೋತು ಬಿದ್ದಿದ್ದೆ. ಹೀಗಾಗಿ ದೇಶದಾದ್ಯಂತ ಬೇರೆ ಬೇರೆ ಹಲವಾರು ಊರುಗಳಲ್ಲಿ ಕೆಲಸ ಮಾಡುವದು ಅನಿವಾರ್ಯವಾಗಿತ್ತು. ಆಯಾ ಊರಿನ ಸಾಂಸ್ಕೃತಿಕ ಜೀವನವನ್ನು ಪರಿಚಯಿಸಿಕೊಳ್ಳಲು ಹವಣಿಸಿದೆ. ಜನಜೀವನವನ್ನು ಅರಿಯಲೆತ್ನಿಸಿದೆ. ದಿನಚರಿ ಬರೆಯುವ ರೂಢಿ ಸಾಧಿಸಿದ್ದು ಬೇರೆ ರೀತಿ. ರಾಜಸ್ಥಾನದ ಜಯಪುರದಲ್ಲಿ ಹಿಂದಿ ಭಾಷೆಯ ಓದು, ಮರುಭೂಮಿಯ ಜನಜೀವನ, ಅಲ್ಲಿಯ ಸ್ನೇಹಶೀಲ ಪ್ರಪಂಚದ ಜೀವನವನ್ನು ಪರಿಚಯಿಸಿಕೊಂಡೆ. ಕಲಕತ್ತೆಯ ಮೂರು ವರ್ಷಗಳ ವಾಸ್ತವ್ಯದಲ್ಲಿ, ಬಂಗಾಲಿ ಭಾಷೆಯಲ್ಲಿ ಓದಲು ಮಾತನಾಡಲು ಕಲಿತೆ. ಹಲವು ಲೇಖಕಿ- ಕಲಾವಿದೆಯರನ್ನು ನಿಕಟವಾಗಿ ತಿಳಿದುಕೊಂಡೆ. ಬಂಗಾಲಿ ನಾಟಕ, ಚಲನಚಿತ್ರ, ಜಾತ್ರಾ, ಸಂಗೀತದ ಪ್ರಕಾರಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿದೆ. ಆ ಕಲಾಸಕ್ತ ಜನಾಂಗದ ಕೆಲವರ ನಾಡಿಯ ಮಿಡಿತವನ್ನು ಕೇಳಿಸಿಕೊಳ್ಳಲು

ಹವಣಿಸಿದೆ. ಲೇಖಕ, ಚರಿತ್ರಕಾರ, ಕಲಾವಿದರ ಪರಿಚಯ ಮಾಡಿಕೊಂಡೆ. ನನ್ನ 'ನೆನಪಿನಲ್ಲಿ ನಿಂತವರು' ಪುಸ್ತಕದಲ್ಲಿ ಈ ಕೆಲವರನ್ನು ನೆನಪಿಸಿಕೊಂಡಿದ್ದೇನೆ. ಧಾರವಾಡದಲ್ಲಿದ್ದಾಗ, ಇತಿಹಾಸದಲ್ಲಿ ಸಂಶೋಧನೆ ಕೈಕೊಂಡು ಡಾಕ್ಟರೇಟ್ ಜೊತೆಗೆ ಹತ್ತಾರು ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸಿದೆ. ಈ ನಿಲ್ದಾಣದಲ್ಲಿ ನನ್ನ ವಿದ್ಯಾಗುರುಗಳ ಸತತ ಮಾರ್ಗದರ್ಶನ ಲಭಿಸಿತು.

ಮೈಸೂರಿಗೆ ಆದ ವರ್ಗ, ಹಿರಿಯ ಸಾಹಿತಿ ಬಳಗವನ್ನು ಅತ್ಯಂತ ನಿಕಟವಾಗಿ ನೋಡಲು ಸಹಾಯ ಮಾಡಿದ್ದರ ಜೊತೆಗೆ ನನ್ನನ್ನು ಲೇಖಕಿಯನ್ನಾಗಿ ರೂಪಿಸಿತು. ನನ್ನ ಹಾಸ್ಯ ಲೇಖನಗಳ ಮೊದಲ ಸಂಕಲನ, ದಿ. ಚದುರಂಗರ ಪ್ರೋತ್ಸಾಹದಿಂದ ಪ್ರಕಟವಾದದ್ದು ಮೈಸೂರಲ್ಲಿದ್ದಾಗಲೇ! ಪ್ರಥಮ ವಿಶ್ವಕನ್ನಡ ಸಮ್ಮೇಳನ, ಆರ್ಕಿಯಲಾಜಿ ಶತಮಾನೋತ್ಸವ ಮೊದಲಾದ ಅಪರೂಪದ ಒಟ್ಟಿಗೆ ಬಂದ ಮಹತ್ವದ ಕಾರ್ಯಕ್ರಮಗಳನ್ನು ಅತ್ಯಲ್ಪ ಸಿಬ್ಬಂದಿಯ ನೆರವಿನಿಂದ ಯಶಸ್ವಿಯಾಗಿ ನಿರ್ವಹಿಸಿದ್ದು, ಮೈಸೂರು ಕೇಂದ್ರದ ಚಿನ್ನದ ಹಬ್ಬ, ಇಪ್ಪತ್ತೆರಡು ದೇಶಗಳ ವಿದ್ಯಾರ್ಥಿಗಳನ್ನು ಒಂದೇ ವೇದಿಕೆಯ ಮೇಲೆ ತಂದು 'ವಿಶ್ವ ಭಾರತಿ' ಬಾನುಲಿ ಕಾರ್ಯಕ್ರಮ ಆಯೋಜಿಸಿದ್ದು, ಪ್ರಸಾರ ಭಾಷಣಗಳ ಪುಸ್ತಕ ಹಾಗೂ ಕವಿತಾ ಸಂಕಲನ ಹೊರ ತಂದದ್ದು – ಇವೆಲ್ಲ ಪರಿಕರಗಳು, ಸಿಬ್ಬಂದಿ ಮುಖ್ಯವಲ್ಲ ಪರಿಶ್ರಮ ತಾನೇ ಮುಖ್ಯ! ಎಂಬ ತತ್ವವನ್ನು ದೃಢೀಕರಿಸಿದವು. ಆ ಕೇಂದ್ರದ ಪುಟ್ಟ ಸಿಬ್ಬಂದಿಯ ಅಂತಃಕರಣಪೂರ್ವಕ ಸಹಕಾರ ಇಲ್ಲದಿದ್ದರೆ ಏನೂ ಸಾಧಿಸುವಂತೆ ಇರಲಿಲ್ಲ.

ಮುಂಬೈ ನಿಲ್ದಾಣದಲ್ಲಿ ನನ್ನ ಬದುಕಿನ ಬಸ್ ನಿಂತಾಗ ಆ ಮಹಾನಗರದ ಸುಪ್ರಸಿದ್ಧ ಗ್ರಂಥಾಲಯಗಳ ವಿರಳ ಗ್ರಂಥ ರಾಶಿಯ ವಾಚನಲಾಭ ದೊರಕಿತು. ನನ್ನ ಬಿಡುವಿನ ಯಾವತ್ತೂ ಸಮಯವನ್ನು ಬೇರೆ ಬೇರೆ ಗ್ರಂಥಾಲಯಗಳಲ್ಲಿ ಕಳೆಯುತ್ತಿದ್ದೆ. ಮುಂದೆ ನನಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ತಂದು ಕೊಟ್ಟ 'ಕರ್ನಾಟಕ ಶಿಕ್ಷಣ ಪರಂಪರೆ' ಬರೆದದ್ದು ಇಲ್ಲಿಯೇ.

ಸೇವಾವಧಿಯ ಕೊನೆಯ ವರ್ಷಗಳನ್ನು ನಾವು ನೆಲೆಸಿದ್ದ ಬೆಂಗಳೂರಿನಲ್ಲಿ ಕಳೆಯುವ ಸದವಕಾಶ ದೊರೆಯಿತು. ಕನ್ನಡ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಆಸಕ್ತಿ, ಮೇಲ್ವಿಚಾರಣೆಗೆ ಅನುಕೂಲವಾದರೂ ಆಡಳಿತಾತ್ಮಕ ತಲೆನೋವುಗಳು ಹತ್ತುಪಟ್ಟು ಹೆಚ್ಚಿದ್ದವು. ಅತ್ಯಂತ ದುಸ್ಸಹವಾದಾಗ ಬಸ್ ಹತ್ತಿ ನೆಲೆ ಸೇರಿಬಿಡೋಣ! ಎಂದು ಮಾನಸಿಕ ತಯಾರಿ ಇದ್ದುದರಿಂದ ನೆಮ್ಮದಿಯಾಗಿಯೇ ಇದ್ದೆ.

ಇವೆಲ್ಲ ನಿಲ್ದಾಣಗಳ ಸವಿ ನೆನಪುಗಳು ಸಾಂಸಾರಿಕ ಸುಖದೊಂದಿಗೆ ಲಭಿಸಿದವು ಎಂದು ಯಾರೂ ಭಾವಿಸಬೇಕಾಗಿಲ್ಲ. ವೈವಾಹಿಕ ಜೀವನದ 36 ವರ್ಷಗಳಲ್ಲಿ 20 ವರ್ಷಗಳನ್ನು ಪತಿ –ಪುತ್ರರಿಂದ ದೂರವಿದ್ದೇ ಕಳೆಯಬೇಕಾಯಿತು. ಒಂದು ಹಂತದಲ್ಲಿ ಅಂತೂ, ಮಗನ ಸೆಮೆಸ್ಟರ್ ಪರೀಕ್ಷೆ ನಡೆಯುತ್ತಿದ್ದಾಗಲೇ ತಂತಿಯ ಆರ್ಡರ್ ಮೇರೆಗೆ ಮುಂಬಯಿಗೆ ರಿಪೋರ್ಟ ಮಾಡಲು ಆದೇಶ ಬಂದಿತ್ತು. ಅದೂ 1 ತಿಂಗಳ ಬಳಿಕ ನಿವೃತ್ತಳಾಗಲಿರುವ ಮಹಿಳೆಗೆ ನನ್ನ ಖುರ್ಚಿಯನ್ನು ತೆರವು ಮಾಡಲು! ನಮ್ಮ ಮೂವರ ಮೂರು ಬೇರೆ ಬೇರೆ ಬಿಡಾರಗಳು ವರ್ಷಗಟ್ಟಲೇ ಮುಂದುವರೆದಿವೆ. ಪತಿಯ ಹೃತ್ಪೂರ್ವಕ ಬೆಂಬಲ ಇಲ್ಲದಿದ್ದರೆ ಇಂಥ ವೃತ್ತಿ ಜೀವನ ಸಾಧ್ಯವಾಗುತ್ತಿರಲಿಲ್ಲ.

ನಿವೃತ್ತಿಯ ನಂತರ ಈಗ ಬದುಕಿನ ಮಹತ್ವದ ಘಟ್ಟ ತಲುಪಿದ್ದೇನೆ. ವೃತ್ತಿ ಜೀವನಕ್ಕಿಂತ ಹೆಚ್ಚು ಚಟುವಟಿಕೆಯಿಂದ ದಿನಗಳು ದಾಟುತ್ತಿವೆ. ಭರ್! ಎಂದು ವರ್ಷಗಳು

ಕಳೆಯುತ್ತಿವೆ. ನಿವೃತ್ತರಾದವರೆಲ್ಲ, ನನ್ನ ಸಮಾನ ವಯಸ್ಕರು, ಸಮದುಃಖಿಗಳು ಅಲ್ಲಲ್ಲ! ಸಮಸುಖಿಗಳು. ಭೇಟಿಯಾದಾಗ ನಡೆಯುವ ಪರಸ್ಪರ ಚರ್ಚೆ ಏನಂತೀರಾ? ಆರೋಗ್ಯದ ಸಮಸ್ಯೆಗಳು. ಅವುಗಳ ಪರಸ್ಪರ ವಿನಿಮಯ. ಮುಂದಿನ ಪ್ರಶ್ನೆ, "ವೇಳೆ ಹೇಗೆ ಕಳೀತೀರಾ? ಬೇಸರ ಬರಲ್ವಾ ಮನೇಲಿ?" ಅಂತ. "ನನಗೆ ಇರೋದು ಸಮಯದ ಅಭಾವ! ಅದು ಕಾಯಂ ಪೀಡಿಸುತ್ತದೆ!" ಎಂದು ಹೇಗೆ ಹೇಳೋದು?

ನಿವೃತ್ತಿಯ ಮೊದಲು ನನ್ನ ಕೇವಲ ನಾಲ್ಕು ಪುಸ್ತಕಗಳು ಪ್ರಕಟವಾಗಿದ್ದವು. ಈ ಹದಿನೆಂಟು ವರ್ಷಗಳಲ್ಲಿ, ಇನ್ನೂ ಎಂಟು ಬಂದವು. ಇನ್ನೆರಡು ಅಚ್ಚಿನಲ್ಲಿವೆ. ವಿರಾಮ ಜೀವನದಲ್ಲಿ ಸುಮಾರು 50 ಸಂಶೋಧನಾ, ವೈಚಾರಿಕ ಹಾಗೂ ಹಾಸ್ಯ ಲೇಖಗಳು



ಹೊರಬಂದವು. ಇವೆಲ್ಲ ಪತ್ರಿಕೆಯವರು, ಸಂಸ್ಥೆಯವರು ಹೇಳಿ ಬರೆಸಿದವುಗಳು. ಕನ್ನಡ, ಇಂಗ್ಲಿಷ್ ಮತ್ತು ಕೊಂಕಣಿ ಭಾಷೆಗಳಲ್ಲಿ ಬರೆಯುತ್ತೇನೆ. ಮೂರು ವರ್ಷಗಳ ಹಿಂದೆ ಪ್ರಾರಂಭವಾದ ನಮ್ಮ ಕುಟುಂಬದ ವೆಬ್ ಸೈಟ್ www.kamat.com ಅತ್ಯಂತ ಜನಪ್ರಿಯವಾಗಿದೆ. ಅದಕ್ಕೆ ಬೇಕಾಗುವ ಸಾಮಾಜಿಕ, ಐತಿಹಾಸಿಕ ಚಿಕ್ಕ ಲೇಖನಗಳನ್ನು ಬಹಳಷ್ಟು ಬರೆಯುತ್ತಿದ್ದೇನೆ.

ವೈಯಕ್ತಿಕ ಅನುಭವಗಳ ಮೇಲೆಯೇ ಬದುಕಿನ ಪಾಠ ನಾನು ಕಲಿತಂತೆ ನಿಮಗೆ ನಿವೇದಿಸಬೇಕಾಗಿ ಬಂದದ್ದು ನನಗೆ ಕೊಂಚ ಇರಸು-ಮುರಸಿನ ವಿಚಾರವೇ! ಏಕೆಂದರೆ ಪ್ರತಿಯೊಬ್ಬರ ಬದುಕೂ ವೈಶಿಷ್ಟ್ಯಮಯವಾದದ್ದು, ವೈವಿಧ್ಯಮಯವಾದದ್ದು. ಆದರೆ ಅವನ್ನೆಲ್ಲ ವಿರಾಮವಾಗಿ ಪರಾಮರ್ಶಿಸಲು, ತೂಗಿ ನೋಡಲು ಹೆಚ್ಚಿನವರು ಯತ್ನಿಸುವದಿಲ್ಲವೆಂದು ಕಾಣುತ್ತದೆ! ಎಲ್ಲರಿಗೂ ಸಮಯದ ಅಭಾವ! ವಿರಾಮದ ಅಭಾವ! ಈ ದೊಡ್ಡ ಅಭಾವವನ್ನು ತುಂಬಿ ತರಲು ನಾನು ಮಾಡಿದ ಪ್ರಯತ್ನದ ಬಗ್ಗೆ ಸ್ವಲ್ಪ ಹೇಳಬಹುದೇನೋ!

ಬೆಂಗಳೂರಿನಲ್ಲಿ ವಾಸಿಸುವ ಮಧ್ಯಮ ವರ್ಗದವರನ್ನು ಮುಖ್ಯತಃ ಎರಡು ಸಮಸ್ಯೆಗಳು ಕಾಡುತ್ತವೆಯೆಂದು ನನ್ನ ಭಾವನೆ. ಮೊದಲನೆಯದು ಸೇವಕರ ಅಥವಾ ಕೆಲಸದವರದು, ಎರಡನೆಯದು ಸಾರಿಗೆಯದು. ಈ ಎರಡು ಅನುಕೂಲಗಳು ನನಗೆ ಮೊದಲೂ ಇರಲಿಲ್ಲ ಈಗಲೂ ಇಲ್ಲ. ಹೀಗಾಗಿ ಮನೆಗೆಲಸ, ವಾಕ್, ಯೋಗ, ಓದು-ಬರಹಗಳಿಗೆ ಬೇಕಾದ ಸಮಯವನ್ನು ನಾನೇ ಹಂಚಿ ಹಾಕಿ ಅದರಂತೆ ನಡೆದುಕೊಳ್ಳುತ್ತಿದ್ದೇನೆ. ಈ ಮೊದಲ ಆಫೀಸಿನ ಏಳೆಂಟು ಕೆಲ ಬಾರಿ ಇನ್ನೂ ಹೆಚ್ಚು ಗಂಟೆಗಳ ಸಮಯ ಈಗ ಸಿಗುತ್ತದೆಯಲ್ಲ? ಈ ಅಮೂಲ್ಯ ಸಮಯದ ಸದುಪಯೋಗ ಆಗ್ತಾ ಇಲ್ಲ ಅಂತ ಪ್ರಾಮಾಣಿಕವಾಗಿ ಒಪ್ಕೋತಿನಿ. Socialising ಅಥವಾ ಸಾಮಾಜಿಕ ಜೀವನ ಇಲ್ಲವೇ ಇಲ್ಲ. ಬೇಕಾದ ಪುಸ್ತಕಗಳು-ವಿಶ್ವಕೋಶಗಳು, ಶಾಸನ ಸಂಪುಟಗಳು, ಗೆಝೆಟಿಯರಗಳು, ಹಳೆಯ ಕಾವ್ಯಗಳಂತಹ ಆಧಾರ ಗ್ರಂಥಗಳೆಲ್ಲ ಮನೆಯಲ್ಲೇ ಇವೆ.

ಸುಂದರ ಬಣ್ಣ ಬಣ್ಣಗಳ ಪುಟಗಳ, ಚಿತ್ತಾರದ ಅಂಚುಳ್ಳ ಬಾಳ ದಿನಚರಿ ನನ್ನೆದುರು ಇದೆ. ಕೇವಲ ಕಾಲುಭಾಗದಷ್ಟು ಪುಟಗಳು ತುಂಬಿವೆ. ಉಳಿದವು ಖಾಲಿ ಖಾಲಿ. ನನ್ನ ದಿನಚರಿ ನಾನೇ ತುಂಬಿಸಬೇಕಷ್ಟೇ? ದೇಶದಾದ್ಯಂತ ತಿರುಗಾಡಿದ ಅನುಭವಗಳನ್ನು, ಅಪೂರ್ವ ವ್ಯಕ್ತಿಗಳ ಭೇಟಿಗಳನ್ನು, ಸಂಶೋಧನೆ ಟಿಪ್ಪಣಿಗಳನ್ನು ಲೇಖಕರ ರೂಪ ರೇಷೆಗಳನ್ನು ದಾಖಲಿಸಬೇಕಾಗಿದೆ. ಈ ದಿನಚರಿ ತುಂಬಿಸಬೇಕಾಗಿದೆ. ಇದು ನಾ ಕಂಡ ಬದುಕಿನ ಕೊನೆಯ ಬಸ್ ಪಯಣದಲ್ಲಿ ಪೂರ್ಣಗೊಳಿಸಬೇಕಾದ ಕೆಲಸ.

ಬಸ್ ಹತ್ತಿದಾಗ ಸಿಗುವ ಸಹ ಪಯಣಿಗರು ಅಸಂಖ್ಯ. ಕೆಲವರು ಮೊದಲೇ ಹತ್ತಿ ಕೊನೆಗೆ ಇಳಿದರೆ, ಹೆಚ್ಚಿನವರು ನಡುವೆ ಹತ್ತಿ ಬೇಗ ಇಳಿಯಬಹುದು. ನಾನು ನಡುವೆ ಹತ್ತಿದವಳು. ಕೊನೆಗೆ ಇಳಿಯಬೇಕಾಗಿದೆ. ಈಗ ಮನೆಯೆಂಬ ನಿಲ್ದಾಣದಲ್ಲಿಯೇ ನಿಂತು ನನ್ನ ಚಿರಪರಿಚಿತ ಬಸ್ಸಿಗೆ ಕಾಯ್ತಾ ಇದ್ದೇನೆ. ಕೊನೆಯ ನಿಲ್ದಾಣ ಸೇರಲೇಬೇಕಲ್ಲ? ಈ ಬಸ್ ಯಾವಾಗ ಬರತ್ತೋ ಗೊತ್ತಿಲ್ಲ. ನಿಧಾನವಾಗ್ತಾ ಇದೆ. ಒಂದು ಅನುಕೂಲವೆಂದರೆ ಈ ಬಸ್ ಮನೆಗೆ ಬರುತ್ತೆ. ಬಸ್ ಬಂದು ನಿಂತಾಗ, ಕಾಲರಾಯ ಹಾರ್ನ ಹಾಕಿದಾಗ, ಬಸ್ ಹತ್ತಲೇಬೇಕು! ಹತ್ತಲಿಕ್ಕೆ ಆಗದಿದ್ದರೆ ಇತರರು ಬಂದು ಹತ್ತಿಸ್ತಾರೆ, ಬೈ ಬೈ ಮಾಡ್ತಾರೆ. ಈ ಬಸ್ ಹತ್ತಿ ಕೊನೆಯ ನಿಲ್ದಾಣ ಮಿಸ್ಸ ಮಾಡುವ ಸಾಧ್ಯತೆ ಇಲ್ಲವೆ ಇಲ್ಲ ನೋಡಿ! ಅಲ್ಲಿ ನನ್ನನ್ನು ಇಳಿಸಿ ಬಿಡ್ತಾರೆ!



## ಡಾ|| ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್ : ನಗೆ ನವಿಲು

ಈ ಕೃತಿಯೂ ಸೇರಿದಂತೆ ಒಟ್ಟು ನವಕರ್ನಾಟಕ ಶೀರ್ಷಿಕೆಗಳು : **1438**

ಮರುಮುದ್ರಣಗಳು ಸೇರಿ ಒಟ್ಟು ನವಕರ್ನಾಟಕ ಪ್ರಕಟಣೆಗಳು : **3606**

### ಶೀರ್ಷಿಕೆಗಳ ಅಂಕಿ-ಅಂಶಗಳು

| ವಿಷಯ | ಸಂಖ್ಯೆ |
|---|---|
| ಮಕ್ಕಳ ಪುಸ್ತಕಗಳು ... | 152 |
| ಚಿತ್ರಕಲೆ, ರಂಗಭೂಮಿ, ಕಲಾಕೋಶ | 13 |
| ವಿಜ್ಞಾನಕೋಶ, ಮಾಹಿತಿಕೋಶಗಳು, ಸ್ಪರ್ಧಾ ಕೈಪಿಡಿಗಳು ... | 13 |
| ಲೋಕಜ್ಞಾನ ಮಾಲೆ ... | 9 |
| ಇಂದ್ರಜಾಲ ... | 2 |
| ಗಣಿತ ... | 5 |
| ನವಕರ್ನಾಟಕ ಜ್ಞಾನ-ವಿಜ್ಞಾನ ಮಾಲೆ | 7 |
| ವಿಜ್ಞಾನ – ಸರಳ ಪರಿಚಯ ಮಾಲೆ ... | 20 |
| ಜನಪ್ರಿಯ ವಿಜ್ಞಾನ, ತಂತ್ರಜ್ಞಾನ ... | 86 |
| ಪರಿಸರ ವಿಜ್ಞಾನ, ಅರಣ್ಯ ಶಾಸ್ತ್ರ, ವನ್ಯಜೀವಿ ಸಂರಕ್ಷಣೆ ... | 16 |
| ಕೃಷಿ , ಹೈನುಗಾರಿಕೆ ... | 16 |
| ಅಡುಗೆ ... | 4 |
| ಆರೋಗ್ಯ, ವೈದ್ಯಕೀಯ, ಮನೋವಿಜ್ಞಾನ ... | 131 |
| ಯೋಗ, ವ್ಯಾಯಾಮ, ಕ್ರೀಡೆ ... | 5 |
| ವ್ಯಕ್ತಿ ವಿಕಸನ ಮಾಲೆ ... | 37 |
| ವ್ಯಕ್ತಿತ್ವ ವಿಕಾಸ, ಸ್ವ-ಸಹಾಯ ... | 4 |
| ಶಿಕ್ಷಣ ... | 24 |
| ಕನ್ನಡ ಕಲಿಕೆ, ವ್ಯಾಕರಣ, ಭಾಷಾಶಾಸ್ತ್ರ | 8 |
| ಪದಕೋಶಗಳು, ಅರ್ಥಕೋಶಗಳು | 12 |
| ಕಾನೂನು, ಅಪರಾಧ ನಿಯಂತ್ರಣ, ಗ್ರಾಹಕ ಸಂರಕ್ಷಣೆ, ಸಂವಿಧಾನ ... | 21 |
| ತತ್ವಶಾಸ್ತ್ರ, ಮತಧರ್ಮ ... | 23 |
| ವಿಚಾರ ಸಾಹಿತ್ಯ, ವೈಜ್ಞಾನಿಕ ಮನೋಧರ್ಮ ... | 44 |
| ಸಮಾಜ ಶಾಸ್ತ್ರ ... | 22 |
| ಆರ್ಥಿಕ, ಸಾಮಾಜಿಕ, ರಾಜಕೀಯ ... | 69 |
| ಸ್ವಾತಂತ್ರ್ಯೋತ್ತರ ಭಾರತ ಅವಲೋಕನ | 12 |
| ಇತಿಹಾಸ ... | 42 |
| ಕ್ರಾಂತಿ ಕಿಡಿಗಳು ಮಾಲೆ ... | 20 |
| ಹೊಸತು ವಾಚಿಕೆ ಮಾಲೆ ... | 18 |
| ಜೀವನ ಚರಿತ್ರೆ, ವ್ಯಕ್ತಿಚಿತ್ರಣ ... | 38 |
| ಸಾಹಿತ್ಯ ಚರಿತ್ರೆ, ವಿಮರ್ಶೆ, ಸಂಕೀರ್ಣ | 15 |
| ನವಕರ್ನಾಟಕ ಸಾಹಿತ್ಯ ಸಂಪದ ಮಾಲೆ | 52 |
| ಪ್ರವಾಸ ಕಥನ, ಅನುಭವ, ಪ್ರಬಂಧ | 24 |
| ಆತ್ಮಕಥನ ... | 7 |
| ವನಿತಾ ಚಿಂತನ ಮಾಲೆ ... | 20 |
| ವಿಶ್ವಕಥಾಕೋಶ ಮಾಲೆ ... | 25 |
| ಕಾದಂಬರಿ, ಕಥೆ, ಕವನ, ನಾಟಕ ... | 91 |
| ಹಾಸ್ಯ ಸಾಹಿತ್ಯ ... | 21 |
| ಅಕ್ಷರ ಕಿರಣ ಮಾಲೆ ... | 135 |
| ನವಕರ್ನಾಟಕ ಚಿತ್ರ ಖಜಾನೆ ... | 19 |
| Children's Literature ... | 28 |
| English Grammar & Language | 17 |
| Popular Science & Technology | 6 |
| Magic ... | 2 |
| Health & Medical Science ... | 15 |
| Law Crime Prevention & Consumer Protection ... | 11 |
| History, Economics & Socio-Political ... | 8 |
| Rational Literature ... | 6 |
| Philosophy ... | 9 |
| Biographies, Memoirs & Essays | 4 |
| Fiction ... | 2 |
| Navakarnataka Picture Treasure | 19 |
| ಹಿಂದಿ ಪುಸ್ತಕಗಳು ... | 5 |
| ಇತರೆ ... | 24 |
| **ಒಟ್ಟು ಶೀರ್ಷಿಕೆಗಳು** | **...1438** |
| ಮರುಮುದ್ರಣಗಳು (ಕನ್ನಡ) | ...2009 |
| ಮರುಮುದ್ರಣಗಳು (ಇಂಗ್ಲಿಷ್) ... | 159 |
| **ಒಟ್ಟು ಪ್ರಕಟಣೆಗಳು** | **...3606** |



## ನಗೆ ನವಿಲು

ನಗೆ ನವಿಲು ತನ್ನ ಗರಿಗೆದರುತ್ತ ನಮ್ಮ-ನಿಮ್ಮ ಬಾಳಿನಲ್ಲಿ ಸದಾ ನಾಟ್ಯವಾಡುತ್ತ ಸುಳಿಯುತ್ತಿದ್ದರೆ ಎಷ್ಟು ಚೆನ್ನ ಅಲ್ಲವೆ ? ಅದು ಸಾಧ್ಯವಾಗ ಬೇಕಾದರೆ ಸಂಸಾರದಲ್ಲಿನ ಪ್ರತಿಯೊಂದು ಕ್ಷಣವನ್ನೂ ಆಸ್ವಾದಿಸುತ್ತ ಒಂದೊಂದು ಹೆಜ್ಜೆಯನ್ನೂ ಎಚ್ಚರದಿಂದಿರಿಸುವುದು ಬಹಳ ಮುಖ್ಯ. ಬದುಕಿನಲ್ಲಿ ತಾನಾಗಿ ಒದಗಿಬರುವ ಪ್ರಸಂಗಗಳನ್ನೆಲ್ಲ ಅಜಾಗ್ರತೆಯಿಂದ ಕಹಿಯಾಗಿಸದೆ ಜಾಣ್ಮೆಯಿಂದ ಸಹನೀಯ- ಸ್ಮರಣೀಯವಾಗಿಸುವಲ್ಲಿ ಗೃಹಿಣಿಯ ಪಾತ್ರ ಹಿರಿದು. ಜೋಡಿ ಹಕ್ಕಿಗಳಂತೆ ಬಾಳ್ವೆ ನಡೆಸುತ್ತ ವಿರಸಕ್ಕೆಡೆಯಿಲ್ಲದಂತೆ ಸಮತೋಲನ ಕಾಪಾಡುತ್ತ ಬಾಳಿನಲ್ಲಿ ನಗೆಹೊನಲನ್ನು ಹರಿಸಿದವರು ಡಾ|| ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್. ಯಾವುದೇ ದೈನಂದಿನ ವ್ಯವಹಾರಗಳಲ್ಲಿನ ಪುಟ್ಟ ವಿಚಾರವೇ ಇರಲಿ, ಅದಕ್ಕೆ ಸ್ವಾರಸ್ಯಕರ ತಿರುವೊಂದು ಲಭಿಸಿದರೆ ಮನರಂಜನೆಯ ವಿಷಯವಾದೀತು. ತಿಳಿಹಾಸ್ಯದ ಲೇಪನ ಕೊಟ್ಟಲ್ಲಿ ಪರಸ್ಪರ ಹೇಳಿಕೊಂಡಾಗ ಖುಷಿ ನೀಡಬಲ್ಲದು. ಈ ಕೃತಿಯಲ್ಲಿನ ಬರಹಗಳೆಲ್ಲವೂ ಲೇಖಕಿಯ ಅನುಭವದಲ್ಲಿನ ಒಂದೊಂದು ಸಂದರ್ಭ - ಸನ್ನಿವೇಶಗಳಲ್ಲಿನ ಸಂಗತಿಗಳೇ. ಬದುಕಿನ ಕ್ಷಣಗಳನ್ನು ಕಣ್ಣಲ್ಲೇ ಕ್ಲಿಕ್ಕಿಸುವ, ನಿಜಜೀವನದಲ್ಲೂ ಅತ್ಯುತ್ತಮ ಫೋಟೋಗ್ರಾಫರ್ ಆಗಿದ್ದ, ಇಲ್ಲಿನ ಲೇಖನಗಳಲ್ಲಿ ಮಿಂಚುವ ಸಜ್ಜನ ರಾಯರು, ಮೈ-ಮನಸ್ಸುಗಳನ್ನು ಭಾರತ - ಅಮೆರಿಕಾಗಳೆರಡರಲ್ಲೂ ಸರಿದೂಗಿಸಿಕೊಳ್ಳುವ ಮಗರಾಯ, ಉನ್ನತ ಅಧಿಕಾರಿಣಿಯಾಗಿದ್ದು ಮನೆಯನ್ನೂ ಸಂಭಾಳಿಸಿಕೊಂಡಿರುವ ಸದ್ಗೃಹಿಣಿ ಇವರೆಲ್ಲ ಇಲ್ಲಿ ಆದರ್ಶಪ್ರಾಯರೇ ಸರಿ.

ಲೇಖಕಿ ಡಾ|| ಜ್ಯೋತ್ಸ್ನಾ ಅವರು ವಿವಿಧ ರಾಜ್ಯಗಳಲ್ಲಿ ಆಕಾಶವಾಣಿಯಲ್ಲಿ ಉದ್ಯೋಗಿಯಾಗಿದ್ದು ನಿವೃತ್ತಿ ಹೊಂದಿದ್ದಾರೆ. ಎಂ.ಎ., ಪಿಎಚ್.ಡಿ. ಪದವೀಧರರು. ಕನ್ನಡ, ಕೊಂಕಣಿ, ಇಂಗ್ಲಿಷ್ ಭಾಷೆಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ಸೇರಿದಂತೆ ಇತರ ಹಲವು ಪ್ರಶಸ್ತಿಗಳು ಇವರಿಗೆ ಸಂದಿವೆ. ಇದೀಗ www.kamats potpourri.com ಎಂಬ ವೆಬ್‌ಸೈಟೊಂದನ್ನು ನಡೆಸುತ್ತಿದ್ದಾರೆ. ಇವರ 'ಕಮಲಾದೇವಿ ಚಟ್ಟೋಪಾಧ್ಯಾಯ' ಎಂಬ ಕೊಂಕಣಿ ಕೃತಿಯ ಕನ್ನಡ ಅನುವಾದವನ್ನು ನವಕರ್ನಾಟಕ ಪ್ರಕಟಿಸಿದೆ.

ISBN 81-8467-326-4



₹ 55 Code : 002058

URL : www.navakarnataka.com
http://navakarnataka.blogspot.in
facebook.com/navakarnataka
twitter.com/navakarnataka